# ಬಡಗಿತನದ ದೇಶೀಯ ತಂತ್ರಜ್ಞಾನ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಿದ್ಧಪಡಿಸಿದ ಕಿರು ಪ್ರಬಂಧ

ಸಂಶೋಧಕ
ಶ್ರೀನಿವಾಸಚಾರಿ. ಬಿ.

ಮಾರ್ಗದರ್ಶಕರು
ಡಾ. ಮೊಗಳ್ಳಿ ಗಣೇಶ್






ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೪

# ಬಡಗಿತನದ ದೇಶೀಯ ತಂತ್ರಜ್ಞಾನ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಿದ್ಧಪಡಿಸಿದ ಕಿರು ಪ್ರಬಂಧ

ಸಂಶೋಧಕ
ಶ್ರೀನಿವಾಸಚಾರಿ. ಬಿ.

ಮಾರ್ಗದರ್ಶಕರು
ಡಾ. ಮೊಗಳ್ಳಿ ಗಣೇಶ್




ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ದೃಢೀಕರಣ ಪತ್ರ

ಶ್ರೀ ಶ್ರೀನಿವಾಸಚಾರಿ .ಬಿ. "ಬಡಗಿತನದ ದೇಶೀಯ ತಂತ್ರಜ್ಞಾನ" ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ.

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಕಿರು ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 22.06.04

ಸ್ಥಳ : ವಿದ್ಯಾರಣ್ಯ

(ಡಾ. ಮೊಗಳ್ಳಿ ಗಣೇಶ್)
ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪೆ
ವಿದ್ಯಾರಣ್ಯ - ೫೮೩ ೨೭೬

# ಪ್ರಮಾಣ ಪತ್ರ

"ಬಡಗಿತನದ ದೇಶೀಯ ತಂತ್ರಜ್ಞಾನ" ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ -೨೦೦೩-೨೦೦೪ ನೇ ಶೈಕ್ಷಣಿಕ ಸಾಲಿನಲ್ಲಿ ಡಾ.ಮೊಗಳ್ಳಿ ಗಣೇಶ್‌ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಸಂಪ್ರಬಂಧವನ್ನು ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: 22.06.04

ಸ್ಥಳ : ವಿದ್ಯಾರಣ್ಯ

(ಶ್ರೀನಿವಾಸಚಾರಿ .ಬಿ.)
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪೆ
ವಿದ್ಯಾರಣ್ಯ - ೫೮೩ ೨೭೬

# ಬಡಗಿತನದ ದೇಶೀಯ ತಂತ್ರಜ್ಞಾನ

★★

# ೧. ಪ್ರವೇಶ: ವ್ಯಾಪ್ತಿ ಉದ್ದೇಶ ಹಾಗೂ ಮಹತ್ವ

**ಪ್ರವೇಶ :**

ಸಂಶೋಧನಾರಂಗದಲ್ಲಿ ಕಾಲಿಟ್ಟನೆಂದ ಮೇಲೆ ಏನೇ ತೊಂದರೆಗಳು ಬಂದರೂ ನಿಭಾಯಿಸಿಕೊಂಡು ಸಾಗಬೇಕು. ಗೊತ್ತಿಲ್ಲದ ಪರಿಚಯವಿಲ್ಲದ ಎಷ್ಟೋ ವಿಷಯಗಳು ಕಾಲಗರ್ಭದಲ್ಲಿ ನಶಿಸಿ ಹೋಗುವ ವಿಷಮ ಪರಿಸ್ಥಿತಿಯಲ್ಲಿ ಅವುಗಳನ್ನು ಹುಡುಕಿ ಸಂಶೋಧನೆಗೆ ಒಳಪಡಿಸಿದಾಗ ಒಂದು ನಿರ್ಧಿಷ್ಟ ಉತ್ತರ ದೊರೆಯುವುದು ಇಂತಹದ್ದೇ ವಿಷಯದ ಬಗ್ಗೆ ಸಂಶೋಧನೆಗೆ ತೊಡಗಿದ ನಾನು ಕ್ಷೇತ್ರ ಕಾರ್ಯದಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸಿದ್ದುಂಟು. ಸರಿಯಾದ ಮಾಹಿತಿ ಕೊಟ್ಟವರು ಉಂಟು, ಕೊಡದಿರುವವರು ಉಂಟು. ಆದರೆ ನಮಗೆ ಬೇಕಾದ ವಿಷಯ ಸಂಗ್ರಹಣೆಯಲ್ಲಿ ವಕ್ತೃಗಳು ಸರಿಯಾದ ಮಾಹಿತಿ ಕೊಡದೇ ನಮ್ಮನ್ನು ಕೆಟ್ಟ ದೃಷ್ಟಿಯಿಂದ ನೋಡುತ್ತಿದ್ದರು. ಇಂತಹ ಅನುಭವ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಆಗುವುದು ಸಹಜ. ಒಬ್ಬ ವ್ಯಕ್ತಿಯ ಹತ್ತಿರ ಗೆಳೆಯನೊಂದಿಗೆ ಹೋದಾಗ ಅವರು ಸುಳ್ಳು ನೆಪ ಹೇಳಿ ಮೋಸ ಮಾಡಲು ಬಂದಿರಬೇಕೆಂಬ ಆತಂಕದಲ್ಲಿ ಮಾಹಿತಿ ಕೊಡದೇ ಹೋದರು. ಆದರೆ ನಾವು ಏಕೆ ಬಂದಿದ್ದೇವೆಂಬುದನ್ನು ಅವರಿಗೆ ತಿಳಿ ಹೇಳಿ ವಿಷಯ ಸಂಗ್ರಹಣೆ ಮಾಡಿಕೊಂಡು ಬಂದೆವು. ಹೀಗೆ ನನ್ನನ್ನು ಅನುಮಾನದ ದೃಷ್ಟಿಯಿಂದ ಭಾವಿಸಿದಂತಹ ಜನರಿಂದ ಮಾಹಿತಿ ಸಂಗ್ರಹಿಸಿದ್ದು ತುಂಬಾ ಪ್ರಯಾಸದ ಕೆಲಸವಾಗಿತ್ತು. ಆದರೂ ನಾನು ಕೂಡ ಬಡಗಿ ಸಮುದಾಯಕ್ಕೆ ಸೇರಿದವನಾಗಿದ್ದರಿಂದ ವಿಷಯ ಸಂಗ್ರಹಣೆಗೆ ಸಹಕಾರಿಯಾದದ್ದಂತೂ ನಿಜ. ಒಂದು ಸಮುದಾಯವೆಂದಮೇಲೆ ದೂರದಿಂದಲೋ, ಹತ್ತಿರದಿಂದಲೋ ಸಂಬಂಧಿಗಳಾಗುವುದು ಸಹಜ. ಅಂತಹ ಆಲೋಚನೆಯಿಂದ ಅವರ ಮನವೊಲಿಸಿ, ಸಂಬಂಧ ತಿಳಿಸಿ ಅವರಿಗೆ ನಮ್ಮಿಂದ ಏನೂ ತೊಂದರೆಯಿಲ್ಲ ಎಂಬ ಭಾವನೆ ಮೂಡಿಸಿ ವಿಷಯ ಸಂಗ್ರಹಣೆ ಮಾಡಿದ್ದುಂಟು.

ಸಂಗ್ರಹಿಸಿದ ವಿಷಯಗಳಿಂದ ಅಧ್ಯಯನಕ್ಕೊಳಪಡಿಸಿ ಈ ಪ್ರವೇಶಿಕೆಯ ಮೊದಲಿಗೆ ವ್ಯಾಪ್ತಿ ಉದ್ದೇಶ ಮತ್ತು ಮಹತ್ವವನ್ನು ವಿವರಿಸಿದ್ದೇನೆ. ಬಡಗಿತನದ ವ್ಯಾಪ್ತಿಯನ್ನು ಅಳೆಯುವುದು ಕಷ್ಟವಾದರೂ ಸಿಕ್ಕಂತಹ ಮಾಹಿತಿಯಿಂದ ಉದ್ದೇಶವೇನೆಂದು ತಿಳಿಸುತ್ತಾ ಬಡಗಿತನದ ಮಹತ್ವವನ್ನು ತಿಳಿಸಿದ್ದೇನೆ. ನಂತರದ ಅಧ್ಯಯನದಲ್ಲಿ ಬಡಗಿ ಸಮುದಾಯದ ಮೂಲವನ್ನು ತಿಳಿಸುತ್ತಾ ಬಡಗಿ ಶಬ್ದದ ಉತ್ಪತ್ತಿ, ಪುರಾಣ, ಶಾಸನ, ಸಾಹಿತ್ಯಿಕ ಐತಿಹ್ಯಗಳನ್ನು ಸಾಧ್ಯವಾದ ಮಟ್ಟಿಗೆ ವಿವರಿಸಿದ್ದೇನೆ. ನಂತರ ಉಪಕರಣಗಳ ನಿರ್ಮಾಣದ ಪರಂಪರೆ ಮತ್ತು ಪ್ರತಿಭೆ ಎಂಬುದರಲ್ಲಿ ಬಡಗಿಯರು ತಯಾರಿಸುವ ಉಪಕರಣಗಳ ಪರಂಪರೆ, ತಯಾರಿಕೆಯಲ್ಲಿ ಪ್ರತಿಭೆ ಹೇಗೆ ವ್ಯಕ್ತವಾಗುತ್ತದೆ ಎಂಬುದರ ವಿವರ ನೀಡಿದ್ದೇನೆ.

ಮೂರನೇ ಅಧ್ಯಾಯದಲ್ಲಿ ಕೌಟುಂಬಿಕ ರಚನೆ ಮತ್ತು ಬಡಗಿತನ ಎಂಬ ಅಧ್ಯಾಯದಲ್ಲಿ ಮಕ್ಕಳ ಪಾತ್ರ, ಮಹಿಳೆಯರು ಈ ಬಡಗಿ ಕೆಲಸಕ್ಕೆ ಹೇಗೆ ಸಹಾಯಕರಾಗುತ್ತಾರೆ. ಮತ್ತು ಕಲಿಯುತ್ತಾರೆಂಬುದರ ಬಗ್ಗೆ ವಿಶ್ಲೇಷಿಸಿದ್ದೇನೆ.

ನಾಲ್ಕನೇ ಅಧ್ಯಾಯದಲ್ಲಿ ಬಡಗಿ ಸಮುದಾಯ ಮತ್ತು ಸಮಾಜದಲ್ಲಿ ಸ್ಥಾನಮಾನ, ಒಪ್ಪಂದಗಳು ಬದಲಾವಣೆಗಳನ್ನು ವಿವರಣೆ ಕಾಣಬಹುದು. ನಂತರದ ಅಧ್ಯಾಯದಲ್ಲಿ ಬಡಗಿತನ ಮತ್ತು ಕಷಿ ಆರ್ಥಿಕತೆಯಲ್ಲಿ ಆಯ ಪದ್ದತಿ, ಪ್ರಾಚೀನತೆ ವಿಧಿಸುತ್ತಿದ್ದ ತೆರಿಗೆ ಸಂಭಾವನೆಯ ವಿವರಣೆ ಇದೆ.

ಆರನೇ ಅಧ್ಯಾಯದಲ್ಲಿ ಬಡಗಿಯವರು ಬಳಸುವ ಮರ ಮುಟ್ಟುಗಳು, ಬಳಸಲಾರದ ಮರಗಳು, ಯಾಕೆ ಬಳಸಬಾರದೆಂಬ ವಿಷಯವನ್ನು ಪ್ರಸ್ತುತಪಡಿಸಲಾಗಿದೆ.

ನಂತರದ ಅಧ್ಯಾಯದಲ್ಲಿ ಪಂಚಾಳ ಜಾನಪದದಲ್ಲಿ ಬಡಗಿಯು ಬಳಸದ ಉಪಕರಣಗಳಿಗೆ ಸಂಬಂಧಿಸಿದ ಜಾನಪದ ನಂಬಿಕೆಗಳು ಆಚರಣೆಗಳನ್ನು ತಿಳಿಸಲಾಗಿದೆ. ನಂತರದ ಅಧ್ಯಾಯದಲ್ಲಿ ಜಾಗತೀಕರಣ ಮತ್ತು ಬಡಗಿತನ ಎಂಬುದರಲ್ಲಿ ಜಾಗತೀಕವಾಗಿ ಬಡಗಿತನಹೇಗಿದೆ. ಜಾಗತಿಕರಣವನ್ನು ಒಪ್ಪಿಕೊಳ್ಳಬೇಕೋ ಅಥವಾ ಬೇಡವೋ, ಜಾಗತೀಕರಣದಲ್ಲಿ ಬಡಗಿತನದ ಅಳಿವು, ಉಳಿವುಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಇಡೀ ಅಧ್ಯಾಯನದ ಒಳಿತು ಕೆಡುಕುಗಳನ್ನು ಉಪ ಸಂಹಾರದಲ್ಲಿ ತೋರಿಸಲಾಗಿದೆ. ಹೀಗೆ ನನಗೆ ತಿಳಿದ ಮತ್ತು ಸಾಧ್ಯವಾದ ಮಟ್ಟಿಗೆ ಈ ಸಮುದಾಯದ ವಿವರಣೆಯನ್ನು ಸಂಗ್ರಹಿಸಿ ವ್ಯವಸ್ಥಿತವಾಗಿ ಅಧ್ಯಯನಕ್ಕೆ ಒಳಪಡಿಸಿದ್ದೇನೆ.

## ವ್ಯಾಪ್ತಿ ಮತ್ತು ಉದ್ದೇಶ ಹಾಗೂ ಮಹತ್ವ :

ವ್ಯಾಪ್ತಿ ಎಂದರೆ ಮೇರೆ, ಗೆರೆ, ಹದ್ದು, ಗಡಿ ಎಂಬ ಮುಂತಾದ ಹೆಸರಿನಿಂದ ಕರೆಯುವ ಈ ವ್ಯಾಪ್ತಿಯ ವಿಸ್ತಾರವಾದ ಅರ್ಥವನ್ನು ಕೊಡುತ್ತದೆ. ಒಂದು ದೇಶಕ್ಕೆ ಸೀಮಿತವಾದ ಗಡಿಯನ್ನು ಗುರುತು ಮಾಡಿಕೊಂಡಿರುತ್ತಾರೆ. ತಮ್ಮ ಹೊಲ ಗದ್ದೆಗಳಿಗೆ ಮೇರೆಯನ್ನು ಗುರುತಿಸಿಕೊಂಡಿರುತ್ತಾರೆ. ಆದರೆ ಒಂದು ಸಮುದಾಯದ ವಿಸ್ತಾರವನ್ನು ಅಳೆಯಲು ಹೋದರೆ ಬೆಂಕಿಯಲ್ಲಿ ಕೈ ಸುಟ್ಟುಕೊಳ್ಳುವಂತೆ ಆಗುತ್ತದೆ.

ಹಾಗೆಯೇ ಪ್ರಾಚೀನ ಕಾಲದಿಂದ ತಮ್ಮನ್ನು ಗುರ್ತಿಸಿಕೊಂಡು ಬಂದಿರುವ ಕರಕುಶಲ ಕರ್ಮಿಗಳ ಅಥವಾ ಪಂಚಾಳ ವೃತ್ತಿಗೆ ಬಡಿಗಿಯ ವ್ಯಾಪ್ತಿಯನ್ನು ನಿರ್ಧಿಷ್ಟವಾಗಿ ಅಳೆಯುವುದು ಬಲು ಕಠಿಣವಾದ ಕೆಲಸ ಎಂದು ಹೇಳಬಹುದು. ಇದಕ್ಕೆ ವ್ಯಾಪ್ತಿಯೇ ಇಲ್ಲ. ಅದು ತನ್ನ ವಿಸ್ತಾರವನ್ನು ಎಲ್ಲೆಲ್ಲೂ ಹರಡಿಕೊಂಡು ಬಂದಿರುವುದು ನಮಗೆ ಹೇಳಲು ಸಾಧ್ಯವಿಲ್ಲವಾದರೂ ಕನಿಷ್ಠ ವ್ಯಾಪ್ತಿಯನ್ನಾದರೂ ನಾವು ನೋಡಬೇಕಾಗುತ್ತದೆ. ಕರಕುಶಲ ಕರ್ಮಿಗಳು ಮತ್ತು ಇತರ ಕಸಬುದಾರರ ಸೀಮೆಯನ್ನು ಅಳೆಯುವುದು ಕೂಡ ಅಷ್ಟೊಂದು ಸಮಂಜಸವಲ್ಲ ಎಂದು ನನ್ನ ಅಭಿಪ್ರಾಯ. ಬೇರನ್ನು ಹರಡಿಕೊಂಡು ಹೆಮ್ಮರವಾಗಿ ಬೆಳೆದಿದೆ. ಮಾನವ ಹುಟ್ಟಿ ಜೀವನೋಪಾಯಕ್ಕೆ ಕೃಷಿಯನ್ನು ಕಂಡುಕೊಂಡಾಗಿನಿಂದ ಹಿಡಿದು ಇಂದಿನವರೆಗೂ ತನ್ನ ಛಾಪನ್ನು ಮೂಡಿಸಿಕೊಂಡಿದ್ದಾರೆ. ಅವನು ಕೃಷಿ ಉಪಕರಣಗಳಾದ ರಂಟೆ, ಕುಂಟೆ, ಕೂರಿಗೆ, ನೊಗ, ಕುಡುಗೋಲು, ಬಾರಿಕೋಲು ಇನ್ನು ಮುಂತಾದ ವ್ಯವಸಾಯದ ಉಪಕರಣಗಳನ್ನು ತಯಾರು ಮಾಡುವ ಬಡಗಿ ಇವುಗಳಿಗೆ ಸೀಮಿತವಾಗಿಲ್ಲ. ಬೇರೆ ಬೇರೆ ಎಲ್ಲಾ ತಂತ್ರಜ್ಞಾನದಲ್ಲಿ ತನ್ನನ್ನು ಈ ಸಮಾಜಕ್ಕೆ ಪರಿಚಯಿಸಿಕೊಂಡಿದ್ದಾನೆ.

ಹಿಂದಿನ ಕಾಲದಿಂದ ಹಿಡಿದು ಇಂದಿನವರೆಗೂ ಕೃಷಿಕರಿಗೆ ವ್ಯವಸಾಯ ಉಪಕರಣಗಳ ಜೊತೆಗೆ ರಥ, ಪಲ್ಲಕ್ಕಿ, ಮಂದಾಸನ, ಮಂಟಪ, ಸಾಂಸ್ಕೃತಿಕ ಉಪಕರಣಗಳ ಜೊತೆಗೆ ಗೃಹ ಉಪಕರಣಗಳನ್ನು ತಯಾರಿಸುವುದು ಈ ಬಡಗಿಯೇ.

ಪ್ರಾಚೀನ ಕಾಲದಿಂದ ಇವತ್ತಿನವರೆಗೂ ಕೃಷಿಕರಿಗೆ ವ್ಯವಸಾಯ ಸಾಮಾಗ್ರಿಗಳನ್ನು ಮಾಡಿಕೊಟ್ಟ ಅವರು ಬೆಳೆದು ಧವಸ ಧಾನ್ಯವನ್ನು ವರ್ಷಕ್ಕೆ ಒಮ್ಮೆ ಇಂತಿಷ್ಟು ಎಂದು ಕೊಡುತ್ತಾರೆ. ಅದಕ್ಕೆ 'ಆಯ' ಎನ್ನುತ್ತಾರೆ. ಅವುಗಳನ್ನು ಪಡೆದವನು ಆಯಗಾರರಾಗುತ್ತಾರೆ. ಇದೇ ರೀತಿಯ ಪದ್ಧತಿಯನ್ನು ಇತರ ದೇಶಿಯ ತಂತ್ರಜ್ಞಾನಕಾರರು ಈ ಜಾಡಿನಲ್ಲೇ ಸಮುದಾಯವಿರಲಿ ಅವರ ಸಂಬಂಧಗಳು ಸಹೋದರರಂತೆ ಒಂದಕ್ಕೊಂದು ಸಂಬಂಧ ಬೆಸೆದುಕೊಂಡು ಬಂದಿವೆ. ಬಡಗಿಯ ವ್ಯಾಪ್ತಿ ಒಂದು ಸಮುದಾಯಕ್ಕೆ ಸೀಮಿತವಾಗಿಲ್ಲ. ಎಲ್ಲಾ ಸಮುದಾಯಕ್ಕೂ ಅವಶ್ಯಕವಾಗಿದೆ. ಚಮ್ಮಾರರಿಗೆ ಇವರು ಅವಶ್ಯಕ ಚಮ್ಮಾರ ಚರ್ಮದಿಂದ ಪಾದರಕ್ಷೆಯನ್ನು ತಯಾರಿಸುವ ಸಾಮಗ್ರಿಯನ್ನು ಬಡಗಿ ಮಾಡಿಕೊಡುತ್ತಾರೆ. ಅವುಗಳಲ್ಲಿ ಪಾದರಕ್ಷೆ ಹರಿದರೆ ಅದನ್ನು ಹೊಲಿಯಲು ಮೊಳೆ ಬೇಕು. ಆ ಮೊಳೆಗೆ ಹಿಂದೆ ಕಟ್ಟಿಗೆಯ ಹಿಡಿ ಇರುತ್ತದೆ. ಅದನ್ನು ತಯಾರಿಸುವವರು ಬಡಗಿ, ಮತ್ತು ಕಮ್ಮಾರ ಕುಂಬಾರರಿಗೂ ಬಡಿಗಿಗೂ ಸಂಬಂಧವನ್ನು ನಾವು ಸಮಾಜದಲ್ಲಿ ನೋಡಬಹುದು. ಕುಂಬಾರ ಮಡಿಕೆಗಳನ್ನು ತಯಾರಿಸಲು ತಿಗರಿ ಅತ್ಯವಶ್ಯ. ಅದಿಲ್ಲದಿದ್ದರೆ ಅವನು ಕೆಲಸ ಮಾಡುವುದಕ್ಕೆ ಬರುವುದಿಲ್ಲ. ಅವರಿಗೆ ಬಡಗಿ ಈ ತಿಗರಿಯನ್ನು ಮತ್ತು ಕೋಲನ್ನು ತಯಾರಿಸಿ ಕೊಡುತ್ತಾನೆ. ಇದರಿಂದ ಅವರಿಬ್ಬರ ಸಂಬಂಧ ತಿಳಿಯುತ್ತದೆ. ಮನೆ ಕಟ್ಟುವ ಕೆಲಸಕ್ಕೆಂದು ಹೆಸರಾಗಿರುವ ಗೊಂಡಿ, ವಡ್ಡರು, ಬೇಲ್ದಾರ್ ಎನ್ನುವ ಪದದಿಂದ ಗುರುತಿಸಿಕೊಂಡಿರುವವರು ವರ್ಗಕ್ಕೂ ಬಡಗಿಗೂ ಸಂಬಂಧವಿರುವುದನ್ನು ನಾವು ನೋಡಬಹುದು. ಮನೆ ಕಟ್ಟುವ ಕೆಲಸಕ್ಕೆ ಬಳಸುವ ಉಪಕರಣಗಳಾದ ಸುತ್ತಿಗೆ, ತ್ಯಾಪಿ, ಮಟ್ಲಗಿ, ಮಟಗೋಲು ತೂಗುಗುಂಡಿ ಇತ್ಯಾದಿಗಳನ್ನು ಬಡಗಿ ತಯಾರಿಸುವರು. ಬಡಗಿ ಅವರಿಗೂ ಅವಶ್ಯಕವಾಗಿ ಕಂಡುಬರುತ್ತದೆ. ಕೂಲಿ ಕಾರ್ಮಿಕರಿಗೆ ಗುದ್ದಲಿ, ಸೆಲಿಕೆ, ಕುಡುಗೋಲು, ಕುರ್ಜಿಗಿ, ಇತ್ಯಾದಿ ಉಪಕರಣಗಳನ್ನು ತಯಾರಿಸಿ ಹಲವಾರು ಕರಕುಶಲಕರ್ಮಿಗಳಿಗೂ ಬಡಗಿ ಅಥವಾ ಪಂಚಾಳರು ಅವಶ್ಯಕತೆ ಇದೆ ಎಂಬುದನ್ನು ತೋರಿಸುತ್ತ ತಮ್ಮ ವ್ಯಾಪ್ತಿಯನ್ನು ವಿಸ್ತಾರಗೊಳಿಸಿಗೊಂಡಿದ್ದಾನೆ. ಮನೆ ಕಟ್ಟುವುದಕ್ಕೆ ವಾಸ್ತುವನ್ನು ಹೇಳಿ ಆ ಮನೆಗಳಿಗೆ ಹಾಕುವ ತೊಲಿ, ಕಂಬ, ಬೋದು, ಬಾಗಿಲು, ಕದ, ಕಿಟಕಿ ಭವಂತಿಗೆ ಇವೆಲ್ಲವುಗಳನ್ನು ಆಯದ ಪ್ರಕಾರ ನಿರ್ಮಿಸುತ್ತಾರೆ. ಇವುಗಳು ಬಡಗಿಯ ಕುಶಲತೆಗೆ ಈ ತಂತ್ರಜ್ಞಾನದ ಗೌರವಕ್ಕೆ ಪಾತ್ರರಾಗಿರುತ್ತಾರೆ. ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿರುವ ಆಯ ಪದ್ಧತಿಯು ಬೆಳೆದುಕೊಂಡು ಬಂದಿರುವ ವಾಸ್ತವ ಸಂಗತಿ. ಆಯ ಪದ್ಧತಿ ಏಕಿತ್ತೆಂದರೆ ಅಂದಿನ ಕಾಲದಲ್ಲಿ ಕೃಷಿಕರ ಕೈಯಲ್ಲಿ ಹಣ ಇರುತ್ತಿರಲಿಲ್ಲ. ಅಲ್ಲದೇ ಹಣ ಚಲಾವಣೆ ಇಲ್ಲದೇ ಇರುವುದರಿಂದ ವಸ್ತು ವಿನಿಮಯ ಪದ್ಧತಿ ಇತ್ತು. ಅದಕ್ಕೋಸ್ಕರ ಸೇವೆಗೆ ಪ್ರತಿಯಾಗಿ ಕೃಷಿಕರಿಂದ ಧಾನ್ಯವನ್ನು ಪಡೆಯುತ್ತಿರುವುದು ಇಲ್ಲಿ ಹೇಳುವುದೆಂದರೆ ಇದರ ವ್ಯಾಪ್ತಿಯಲ್ಲಿ ಬರುವ ಆಯ ಪದ್ಧತಿಯನ್ನು ತಿಳಿಸಬಹುದಾಗಿದೆ. ರಾಜರ ಆಳ್ವಿಕೆಯಲ್ಲಿ ರಾಜ ಮಹಾರಾಜರು ವಾಸಿಸುವ ಅರಮನೆಗೆ ಬಾಗಿಲು, ಕದ, ಕಿಟಕಿ, ಸಿಂಹಾಸನ ಕಿರೀಟ ಆಭರಣಗಳನ್ನು ಮತ್ತು ಯುದ್ಧೋಪಕರಣಗಳನ್ನು ಜೊತೆಗೆ ಶಿಲ್ಪ ಚಿತ್ರದಿಂದ ಅಲಂಕರಿಸಿ ನಿರ್ಮಿಸಿ ರಾಜರಿಂದ ಹೊಗಳಿಕೆಗೆ ಪಾತ್ರರಾಗಿದ್ದ ಪಂಚಾಳರಲ್ಲಿ ಬಡಿಗಿಯರು ಒಬ್ಬರು. ಇವರು ಕುಶಲತೆಗೆ ರಾಜ ಮೆಚ್ಚಿ ಅವರನ್ನು ಗೌರವಿಸಿದ ಉದಾಹರಣೆಗಳು ಸಿಗುತ್ತವೆ.

ಸಾಂಸ್ಕೃತಿಕವಾಗಿಯೂ ಬಡಗಿಯು ತನ್ನ ಸೇವೆಯನ್ನು ಸಲ್ಲಿಸಿದ್ದಾನೆ. ಗುಡಿ ಗೋಪುರ, ವಿಗ್ರಹ, ದೇವಾಲಯದ ಬಾಗಿಲು ಮಾನಸ್ಥಂಭ, ದೀಪಸ್ತಂಭ, ದೇವರ ಮಂದಾಸನ, ದೇವಿಯ ಮೂರ್ತಿಗಳು ಇತ್ಯಾದಿಗಳನ್ನು ಕೆತ್ತಿದ್ದಾರೆ. ಇವರು ಇರುವ ಸ್ಥಳ ಊರು ಸಮುದಾಯಗಳೇ ಇಲ್ಲ. ಇವರ ವ್ಯಾಪ್ತಿ ಬಹು ವಿಶಾಲವಾಗಿದೆ. ಇನ್ನು ಮನೋರಂಜನೆ ಆಟಿಕೆಗಳು ಉಪಕರಣಗಳನ್ನು ತಯಾರಿಸುವ ಕಾರ್ಯವನ್ನು ಇವರು ಮಾಡುತ್ತಾರೆ. ಇವರ ವ್ಯಾಪ್ತಿಯನ್ನು ನಿರ್ಧಿಷ್ಟವಾಗಿ ಅಳೆಯಲು ಸಾಧ್ಯವಲ್ಲದ ಕೆಲಸ. ಇವರು ತನ್ನದೇ ಆದ ಛಾಪನ್ನು ಮೂಡಿಸಿ ತನ್ನ ವಿಸ್ತಾರವನ್ನು ವಿಸ್ತರಿಸಿಕೊಂಡು ಸಮಾಜ ಸೇವೆಗೆ ಪಾತ್ರನಾಗಿದ್ದಾನೆ. ಒಟ್ಟಾರೆಯಾಗಿ ಹೇಳಬೇಕೆಂದರೆ ಬಡಗಿಯರು ಪ್ರತಿಯೊಂದು ರಂಗದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಾರೆ. ಮಂತ್ರ ಪಟಿಸುವುದರ ಜೊತೆಗೆ ಕೆಲಸವನ್ನು ಮಾಡುವ ಪರಂಪರೆ ಬೆಳೆದುಕೊಂಡು ಬಂದಿದೆ. ಸಂಗೀತ ವಾದ್ಯ ತಯಾರಿಕೆ ಜೋತಿಷ್ಯ, ಪುರೋಹಿತರಾಗಿಯು ಇವರು ಪಾತ್ರವನ್ನು ನಾವು ಕಾಣಬಹುದು. ಅದಕ್ಕೆ ಹೇಳುವುದು ಇವರಿಗೆ ಮೇರೆಯೇ ಇಲ್ಲ. ಎಲ್ಲಾ ರಂಗದಲ್ಲೂ ತಮ್ಮ ಪ್ರತಿಭೆಯನ್ನು ಬಿಂಬಿಸಿದ್ದಾರೆ.

## ಉದ್ದೇಶ :

ವ್ಯಾಪ್ತಿಯ ಜೊತೆಗೆ ಬಡಗಿ ಸಮುದಾಯದ ಉದ್ದೇಶವನ್ನು ನಾವು ಹೇಳಬೇಕಾಗಿರುವುದರಿಂದ ಇಲ್ಲಿ ಪ್ರಸ್ತುತಪಡಿಸಲಾಗಿದೆ. ವ್ಯಾಪ್ತಿ ಅದರ ಸುತ್ತಾಮುತ್ತಾ ಹೇಳಿದರೆ ಉದ್ದೇಶವು ಯಾವ ಕಾರಣಕ್ಕಾಗಿ? ಹೀಗೆ ? ಏನು ? ಎಂಬ ಪ್ರಶ್ನೆಗಳು ಜೊತೆಗೆ ಇದರ ಬಗೆಗೆ ಯಾವ ರೀತಿಯ ಮಾರ್ಗದ ಕಡೆ ಸಾಗುತ್ತದೆ ಎಂಬುವುದನ್ನು ಹೇಳುವ ಉದ್ದೇಶ ಇವರ ಶಿಲ್ಪಕಲೆ, ಚಿತ್ರಕಲೆ, ಉಪಕರಣಗಳ ತಯಾರಿಕೆಯಲ್ಲಿ ಪರಿಣಿತೆ ಹೊಂದಿದ್ದರು. ಅವರು ಯಾವ ನೀತಿಯಿಂದ ಬೆಳೆದುಕೊಂಡು ಬಂದರು. ಅವರ ಆರ್ಥಿಕ, ಸಾಮಾಜಿಕ ನೀತಿ, ಇತಿಹಾಸವನ್ನು ಉಳಿಸಿಕೊಂಡು ಬಂದಿದ್ದಾರೆ ಎಂಬುದು ಈ ಕಿರು ಪ್ರಬಂಧದ ಉದ್ದೇಶ. ಬಡಗಿ ಸಂಸ್ಕೃತಿಯು ಅಧ್ಯಯನವನ್ನು ಕೆಲವು ದಶಕಗಳ ಹಿಂದೆಯೇ ನಡೆಸಿದ್ದರೆ ಆ ಸಂಸ್ಕೃತಿಯ ಮೂಲ ಗ್ರಹಿಕೆಗಳು ನಮಗೆ ಲಭ್ಯವಾಗುತ್ತಿದ್ದವು. ಆಗ ಈ ಸಮುದಾಯದ ಸಮಗ್ರ ಹಾಗೂ ಸಮರ್ಥ ಅಧ್ಯಯನಕ್ಕೆ ಹೆಚ್ಚು ಅವಕಾಶವಿರುತ್ತಿತ್ತು. ಈ ಸಮುದಾಯ ಆಧುನೀಕರಣದ ಮಾರಣ ಹೋಮಗಳಿಂದಾಗಿ ಅದರ ಕೊನೆ ಉಸಿರನ್ನೀಗ ಆಡುವ ಸ್ಥಿತಿಗೆ ತಲುಪಿದೆಯಾದರೂ ಬಡಗಿತನದ ಬಗೆಗೆ ಅಭ್ಯಾಸ ಮಾಡಿದವರ ಸಂಖ್ಯಾ ಸೊನ್ನೆ ಎಂದು ಹೇಳಬಹುದು.ಈ ಕಿರು ಪ್ರಬಂಧದಿಂದ ಈ ಸಮುದಾಯದ ಸ್ವಲ್ಪವಾದರೂ ಮುಂದಿನ ಪೀಳಿಗೆಗೆ ಅನುಕೂಲವಾದೀತು ಎಂಬ ಉದ್ದೇಶವನ್ನು ಸಂಘ ಸಂಸ್ಥೆಗಳಿಂದ ಸೂಚನೆಯ ಮೂಲಕ ಪರಿಹಾರ ಮಾರ್ಗ ಹುಡುಕುವುದೇ ಎಂಬ ಪ್ರಶ್ನೆ ನಮ್ಮ ಮುಂದೆ ಬರುತ್ತದೆ.

ಬಡಗಿ ರಾಜರ ಮನ್ನಣೆಗೆ ಪಾತ್ರನಾಗಿದ್ದ. ಏಕೆಂದರೆ ಅವರ ಅರಮನೆಯಲ್ಲಿ ಸಿಂಹಾಸನವನ್ನು ತಯಾರಿಸುವ ಬುದ್ಧಿವಂತಿಕೆ ಪಡೆದಿದ್ದ. ಅದಕ್ಕೆ ಅಂದಿನ ಕಾಲ ಪರಿಸ್ಥಿತಿ ಸಾಮಾಜಿಕ ವ್ಯವಸ್ಥೆ, ಧಾರ್ಮಿಕ, ಸಾಂಸ್ಕೃತಿಕ, ವ್ಯವಸ್ಥೆಯಲ್ಲಿ ತಮ್ಮನ್ನು ಸಮಾಜದ ಸೇವೆಗೆ ತೊಡಗಿಸಿಕೊಂಡಿರುವುದು ಜೊತೆಗೆ ವೇದ ಮಂತ್ರ ಪುರಾಣ ಪೂಜೆ ಆಚಾರ, ವಿಚಾರ ಇತ್ಯಾದಿಗಳಲ್ಲಿ ಹೇಗೆ ತೊಡಗಿಸಿಕೊಳ್ಳುತ್ತಿದ್ದ ಈಗ ಅವರ ಆಚಾರ ವಿಚಾರಗಳು ಆಧುನೀಕರಣದ ಬಿರುಗಾಳಿಗೆ ಸಿಕ್ಕು ಹೇಗೆ ಜೀವಿಸುತ್ತಾನೆ, ಎಂಬುವುದನ್ನು ಹೇಳುವ ಪ್ರಯತ್ನ ಇದರ ಉದ್ದೇಶವಾಗಿದೆ.

ವಿಶ್ವಕರ್ಮರು ಎಲ್ಲಾ ಸಮುದಾಯದ ಜೊತೆ ಸಂಬಂಧವನ್ನು ಕಲ್ಪಿಸಿಕೊಂಡು ಬಂದಿದ್ದಾರೆ. ಇವರನ್ನು ಅವರೂ ಕೂಡ ಗೌರವದಿಂದ ಕಾಣುತ್ತಾ ಕೊಡು-ಕೊಳ್ಳುವಿಕೆಯ ಆಧಾರದಿಂದ ಇವರ ಬಂಧುತ್ವ ಬೆಳೆದುಕೊಂಡು ಬಂದು ಎಲ್ಲಾ ವರ್ಗ ಕುಲ ಕಸಬುಗಳ ಉಪಕರಣ ತಯಾರಿಸುವ ಈ ವಿಶ್ವಕರ್ಮರ ಕೆಲಸ ಗೃಹಬಳಕೆಯ ಪ್ರತಿಯೊಂದು ತಯಾರಿಕೆಯಲ್ಲಿ ಇವರ ಪಾಲಿದೆ ಎಂದು ಹೇಳಿದರೆ ತಪ್ಪಾಗಲಾರದು. ಇವರು ಕೌಶಲ್ಯವಂತರು. ಮುಟ್ಟದೆಯೇ ಯಾವುದರಲ್ಲಿ ಏನಾಗುತ್ತದೆ ಎಂಬುವುದನ್ನು ಕ್ಷಣದಲ್ಲಿ ಹೇಳಿಬಿಡುವ ಬುದ್ಧಿವಂತಿಕೆ ಇವರಿಗಿತ್ತು ಎಂದು ಹೇಳುತ್ತಾ, ಈಗಿನ ಪೀಳಿಗೆ ಅಂತ ಚಾಣಾಕ್ಷತನ ಇಲ್ಲ ಆಧುನೀಕರಣದ ನೆರಳಿನಲ್ಲಿ ನಿಂತು ಯಂತ್ರೋಪಕರಣದ ಜೊತೆ ಜೀವನ ಸಾಗಿಸುವ ಬುದ್ಧಿ ಇವರದಾಗಿದೆ. ಏನೇ ಆದರೂ ಅಂದಿನ ತಲೆಮಾರಿನ ಬುದ್ಧಿವಂತಿಕೆಯು ಇಂದಿನವರು ಸರಿಸಮಾನರಲ್ಲ Old is Gold ಎನ್ನುವುದನ್ನು ಹೇಳುವ ಉದ್ದೇಶ.

ಬಡಗಿ ಅಥವಾ ಪಂಚಾಳರ ನಂಬಿಕೆ ಆಚಾರಗಳ ಮೂಲಕ ಅವರ ಮೂಲ ಸಂಸ್ಕೃತಿಯ ಸ್ವರೂಪವನ್ನು ಸತ್ಯಕ್ಕೆ ಸಮೀಪದಲ್ಲಿ ಗ್ರಹಿಸಿ ಗುರುತಿಸುವುದು ಈ ಅಧ್ಯಯನದ ಉದ್ದೇಶ. ಒಟ್ಟಾರೆಯಾಗಿ ಹೇಳಬೇಕೆಂದರೆ ವಿಶ್ವಕರ್ಮರಲ್ಲಿ ಒಬ್ಬರಾದ ಬಡಗಿಯ ವಿಶಾಲ ಹೃದಯವನ್ನು ತೆರೆದು ಇತರ ಸಂಸ್ಕೃತಿಗೆ ಪರಿಚಯಿಸುವುದು ಈ ಪ್ರಬಂಧದ ಉದ್ದೇಶ.

## ಮಹತ್ವ :

" ರೈತ ದೇಶದ ಬೆನ್ನೆಲಬು ಬಡಗಿಯರು ರೈತರ ಬೆನ್ನೆಲುಬು " ಎಂಬ ವಾಕ್ಯವನ್ನು ನೋಡಿದರೆ ಗೊತ್ತಾಗುತ್ತದೆ. ಇವರ ಮಹತ್ವವನ್ನು ತಿಳಿಯಲು ವೇದ ಕಾಲಕ್ಕಿಂತ ಹಿಂದೆಯೇ ತಮ್ಮ ಅಸ್ಥಿತ್ವವನ್ನು ಉತ್ಪಾದನಾ ವ್ಯವಸ್ಥೆಯ ವಿವಿಧ ಮಜಲುಗಳ ಅಧ್ಯಯನಕ್ಕೆ ಕೈ ಹಾಕುವುದು ಸಲ್ಪ ಕಷ್ಟಕರವಾದುದೇ. ಕ್ರಿ.ಶ.ಪೂರ್ವ ಯುಗದಿಂದ ವಿಶ್ವಕ್ಕೆ ಉತ್ಪಾದನಾ ವ್ಯವಸ್ಥೆಗೆ ತಮ್ಮದೆ ಆದ ಕೊಡುಗೆಯನ್ನು ವಿಶ್ವಕರ್ಮರು ಕೊಡುತ್ತಲೇ ಬಂದಿರುವುದು ಖಚಿತ. ಆದಿಮಾನವ ಕೃಷಿಯ ಮೂಲಕ ಆಹಾರ ಉತ್ಪಾದನೆ ಪ್ರಾರಂಬಿಸಿದ ಮೇಲೆ ಅವನು ಉತ್ಪಾದನೆಗೆ ಬೇಕಾಗುವ ಅನೇಕ ಉಪಕರಣಗಳನ್ನು ಸೃಷ್ಠಸುವ ಮೂಲಕ ತಮ್ಮ ಅಸ್ಥಿತ್ವವನ್ನು ವಿಶಕರ್ಮರು ಬೆಳ್ಳಿ ಚುಕ್ಕೆಯಂತೆ ಎಲ್ಲರಿಗೂ ಕಂಡರು. ತಮ್ಮನ್ನು ಗುರಿತಿಸಿಕೊಂಡು ಖನಿಜ ಸಂಪತ್ತುಗಳ ಶೋದನೆ ಮತ್ತು ಸಂಸ್ಕರಣೆ ಕಂಡು ಕೊಂಡ ಮೇಲೆ ಉತ್ಪಾದನ ವ್ಯವಸ್ಥೆ ಮತ್ತು ವಿಶಕರ್ಮರ ಘನತೆ ಗೌರವಗಳು ಅಭಿವೃದಿ ಹೊಂದ ತೊಡಗಿದರು ಭಾರತದೇಶದ ಮೂಲ ನಿವಾಸಿಗಳಾದ ಇವರು ಬೆಂಕಿಯ ಉಪಯೋಗ ಕಂಡುಕೊಂಡ ಮೇಲೆ ಇವರ ದಿಕ್ಕು ಬದಲಾಗಿತು. ಹೀಗಾಗಿ ಇವರು ಬೆಂಕಿಯನ್ನು ಶಕ್ತಿ ದೇವತೆ ಎಂದು ಆರಾದಿಸ ತೊಡಗಿದರು. ತಾಮ್ರ, ಹಿತ್ತಾಳೆ, ಬೆಳ್ಳಿ, ಬಂಗಾರ, ಕಂಚು, ಕಬ್ಬಿಣ, ಕಟ್ಟಿಗೆ ಮುಂತಾದ ಕಚ್ಚ ವಸ್ತುಗಳನ್ನು ಕಂಡುಕೊಂಡ ಮೇಲೆ ಅನೇಕ ವೃತ್ತಿಗಳು ಇವರಲ್ಲಿ ಹುಟ್ಟಿಕೊಂಡವು. ಈ ಎಲ್ಲಾ ವೃತ್ತಿಯನ್ನು "ರಾಷ್ಟ್ರಿಯ ಉತ್ಪಾದನಾ ವ್ಯವಸ್ಥೆ " ಎಂದು ಹಲವು ವಿದ್ವಾಂಸರು ಕರೆದರು. ಪ್ರಕೃತಿಯನ್ನೆ ಶಕ್ತಿ ಎಂದು ಆರಾಧಿಸುತ್ತಿದ್ದ ಜನತೆಗೆ ಆ ಶಕ್ತಿಯನ್ನೇ ಮೂರ್ತಿರೂಪದಲ್ಲಿ ಸೃಷ್ಟಿಸಿದರು ಈ ವಿಶ್ವಕರ್ಮರು ಸಾಮಾನ್ಯವಾಗಿ ಪಾಂಚಾಳರು ಕನಿಷ್ಠ ಮೂರು ವೃತಿಗಳಲ್ಲಿ ಪರಿಣಿತರಾಗಿರುತ್ತಾರೆ. ಬಡಿಗಿಯ ಕಮ್ಮಾರಿಕೆ, ಶಿಲ್ಪಿ ಕೆಲಸವನ್ನಾದರೂ ಮಾಡುತ್ತಿರುತ್ತಾರೆ ಪಂಚ ವೃತ್ತಿಗಳನ್ನು ಈ ವಿಶ್ವಕರ್ಮರು ಕರಗತಮಾಡಿಕೊಂಡಿದ್ದರು. ಅರವತ್ನಾಲ್ಕು ಕಲೆಗಳಲ್ಲಿ ನಿಪುಣರು ಎಂದು ಕರೆಸಿಕೊಂಡಿದ್ದಾರೆ. ವಿಶ್ವಕರ್ಮ

ಸಮುದಾಯದ ಬ್ರಾಹ್ಮಣರು ಪೂಜೆ ಪುನಸ್ಕಾರ ಆಚಾರ ವಿಚಾರ ಮಂತ್ರ ಪಠಣ ಪುರೋಹಿತಿಕೆ ಜೊತೆ ಜೊತೆಗೆ ವೃತ್ತಿ.ಪರಿಣಿತೆಯನ್ನು ಪಡೆದಿರುವುದು ಸ್ವಾಗತಾರ್ಯ. ವೇದ ಬ್ರಾಹ್ಮಣರೆನಿಸಿ ಕೊಂಡವರು . ಏನೇ ಬುದ್ಧಿಹೊಂದಿದ್ದರೂ ಕೇವಲ ಮಂತ್ರಪಠಣದಿಂದ ಪುರೋಹಿತಿಕೆಯಿಂದ ತಮ್ಮ ಉಪಜೀವನ ಮಾಡುತ್ತಿದ್ದಾರೆ. ಆದರೆ ವಿಶ್ವಬ್ರಾಹ್ಮಣರು ಮಂತ್ರ-ಯಂತ್ರಸಂಗಡ ಕರಕುಶಲತೆಯ ತಂತ್ರಜ್ಞಾನದಲ್ಲಿ ತಮ್ಮನ್ನು ತೊಡಗಿಸಿಕೊಂಡು ಇತರರಿಗೆ ತಮ್ಮ ಪಾಂಡಿತ್ಯವನ್ನು ತೋರಿಸಿಕೊಟ್ಟಿದ್ದಾರೆ. ಇವರು ಬ್ರಹ್ಮಜ್ಞರೂ ಆಗಿದ್ದುಂಟು. ದೇವಾಸುರರಿಬ್ಬರಿಗೂ ಜ್ಞಾನ ಶಕ್ತಿಯ ಅವಶ್ಯಕತೆ ಇತ್ತು ಅದರಿಂದ ಹಿಂದಿನ ಕಾಲದಲ್ಲಿ ಸಮಾಜಸುಧಾರಣೆ ಕಾರ್ಯದಲ್ಲಿ ಮಹತ್ವವೂ ಇವರಿಗೆ ಮೀಸಲಿತ್ತು . ಅರ್ಯಭಾಷಿಕರು ವಿಜಿಗೀಷಗಳಾಗಿ ಇಲ್ಲಿಗೆ ಬಂದರು ಸೈಂದವ ಸಂಸ್ಕೃತಿಯ ವೇದ ಪೂರ್ವಕಾಲದಲ್ಲಿದ್ದರು ಎಂಬ ಮಾತು ನಿಜವಾದರೆ ಅಲ್ಲಿಯ ವಾಸ್ತು ಶಿಲ್ಪ ಕುಶಲತೆಗಳನ್ನು ಸೃಷ್ಠಸಿದ ಈ ವಿಶ್ವಕರ್ಮರು ಈ ದೇಶಿಯರು. ಇಂದ್ರನು (ವಿಶ್ವರೂಪ ನಿರ್ಮಾಣ ಶಕ್ತಿಯ ಪ್ರತೀಕವಾದ) ವಿಶ್ವರೂಪದ ದ್ವೇಷಿಯಾಗಿದ್ದನು ಎಂಬ ಕಥೆಯಿಂದ ಯಂತ್ರ ಮಂತ್ರಗಳಲ್ಲಿ ಸಿದ್ದಹಸ್ತರಾದ ಈ ವಿಶ್ವಕರ್ಮ ಸಂಪ್ರದಾಯದವರು ಪೂರ್ವಜರು ,ಆರ್ಯರಿಗಿಂತಲೂ ಮುಂಚಿನಿಂದಲೇ ಈ ದೇಶದಲ್ಲಿ ಇದ್ದರೆಂದು ಊಹೆಗೆ ಅವಕಾಶ ದೊರೆಯುತ್ತದೆ ಎಂದು ಶಂಬಾಜೋಷಿಯವರು ಅಭಿಪ್ರಾಯ ಪಡುತ್ತಾರೆ. (ಸಂ೨ಪು೬೧)

ಹರಪ್ಪ ಮಹಂಜೋದಾರೂಗಳ ಉತ್ಖನನದಲ್ಲಿ ಅನೇಕ ಶಿಲ್ಪಗಳನ್ನು ಸಂಶೋಧಕರು ಪತ್ತೆಹಚ್ಚಿದ್ದಾರೆ. ಈ ಕಾಲಕ್ಕೆ ಮಾತ್ರ ಆರಾದನಾ ವ್ಯವಸ್ಥೆ ಪ್ರಭಲವಾಗಿತ್ತು. ಹರಪ್ಪ ಮೆಹಂಜೋದಾರೊ ಕಾಲಕ್ಕೆ ವಿಗ್ರಹಗಳನ್ನು ರಚಿಸುವ,ಸೃಷ್ಠಿಸುವ ವರ್ಗ ಆಗಲೇ ಬೆಳೆದು ಬಂದಿತ್ತು ಎಂಬುದ ತಿಳಿಯುತ್ತದೆ.

ವಿಶ್ವಕರ್ಮರು ವೇದ ಪೂರ್ವ ಕಾಲದಲ್ಲೇ ತಮ್ಮ ವೃತ್ತಿಗಳ ಮೂಲಕ ರಾಜನಿಂದ ಸೇವಕನ ವರೆಗೆ ಗುರಿತಿಸಲ್ಪಟ್ಟವರು .ರಾಜ ಮಹಾರಾಜರ ಆಶೋತ್ತರಗಳನ್ನು ಈಡೇರಿಸಲು ಅವರ ಕಲ್ಪನೆಗಳನ್ನು ಸಾಕಾರಗೊಳಿಸಲು ವಿಶ್ವಕರ್ಮರು ಗುರುತರವಾದ ಕೆಲಸಗಳನ್ನು ಕೈಗೊಂಡರು .ರಾಜರು ತಮ್ಮ ಆಳ್ವಿಕೆಯಲ್ಲಿ ಅಚ್ಚಳಿಯದಂತೆ ಉಳಿಯುವ ಕಾರ್ಯಗಳಾದ ದೇವಾಲಯ, ಮೂರ್ತಿಶಿಲ್ಪ, ಶಿಲಾಶಾಸನ,ತಾಮ್ರಶಾಸನ, ಕಾಷ್ಠಶಿಲ್ಪ, ವೀರಗಲ್ಲು, ಮಹಾಸತಿಕಲ್ಲು, ರಾಜನ ಸಿಂಹಾಸನ ,ಕೀರಿಟ,ಆಭರಣ,ಅಲಂಕಾರಿತ ವಸ್ತುಗಳು ಅರಮನೆಗಳ ನಿರ್ಮಾಣ ಕೋಟೆ ಕೆತ್ತಲಗಳ ನಿರ್ಮಾಣ ಮಾಡುವುದು ಎಲ್ಲಕ್ಕಿಂತ ಮುಖ್ಯವಾಗಿ ತಮ್ಮ ಇರುವಿಕೆಯನ್ನು ಗುರಿತಿಸುವಂತಹ ರಾಜ ಮುದ್ರೆ,ನಾಣ್ಯ , ಆಯುಧ ,ತೇರು, ಪಲ್ಲಕಿ ,ಛತ್ರಿ, ಚಾಮರ , ಹೀಗೆ ಹಲವಾರು ಕಾರ್ಯಗಳನ್ನು ವಿಶ್ವಕರ್ಮರು ಪೂರೈಸಿ ಅನೇಕ ಶಾಸನಗಳಲ್ಲಿ ತಮ್ಮ ನಾಮಗಳನ್ನು ಉಳಿಸಿಕೊಂಡು ಬಂದಿದನ್ನು ನೋಡಿದರೆ ಅವರ ಮತ್ತು ಈ ಪ್ರಬಂಧದ ಮಹತ್ವವನ್ನು ನಾವು ತಿಳಿಯಬೇಕು. ಇಂತಹ ವಿಶಿಷ್ಠ ಸಮುದಾಯದ ಬಗ್ಗೆ ಅವರ ವೃತ್ತಿ ಮತ್ತು ಪರಿಶ್ರಮ ವಿಶ್ವಧರ್ಮಕ್ಕೆ ಭಾರತೀಯ ಸಂಸ್ಕೃತಿಗೆ ವಿಶ್ವಕರ್ಮರು ಕಾಣಿಕೆಯನ್ನು ಕೊಟ್ಟು ಉಳಿಸಿಕೊಂಡು ಬರುತ್ತಿದ್ದಾರೆ.

ಕೃಷಿಕರನ್ನು ಅವಲಂಬಿಸಿ ಜೀವನ ಮಾಡುವಂತಹ ವರ್ಗ ಬಡಗಿಯರುದು. ತನ್ನ ಕರಕುಶಲ ಕಲೆಯನ್ನು ತುಂಬಾ ನೈಪುಣ್ಯತೆಯಿಂದ ದೇಸೀಯ ತಂತ್ರಜ್ಞಾನವನ್ನು ಬೆಳೆಸಿಕೊಂಡು ಬಂದವರು. ಭಾರತದಲ್ಲಿ ಉತ್ಪಾದನಾ ವ್ಯವಸ್ಥೆಯಲ್ಲಿ ದೇಸೀಯ ಕರಕುಶಲಕರ್ಮಿಗಳು ಎಲ್ಲಾ ಸಮುದಾಯಕ್ಕೆ

ತಮ್ಮನ್ನು ಉಪಯೋಗಿಸಲ್ಪಟ್ಟಿದ್ದಾರೆ. ಬಡಗಿ ಮತ್ತು ಕುಂಬಾರ ಬಡಗಿ ಮತ್ತು ಕಮ್ಮಾರ ಬಡಗಿ ಮತ್ತು ಚಮ್ಮಾರ, ಬಡಗಿ ಮತ್ತು ವಡ್ಡರು ಬಹು ಮುಖ್ಯವಾಗಿ ಬಡಗಿ ಮತ್ತು ಕೃಷಿಕರು ಬಡಗಿ ಮತ್ತು ಕೊರವರು ಬಡಗಿ ಮತ್ತು ನೇಕಾರ, ಚಿಂಪಿಗರು, ಹೀಗೆ ಎಲ್ಲಾ ಸಮುದಾಯಕ್ಕೂ ಇವರು ಅವಶ್ಯಕವಾಗಿ ತಮ್ಮನ್ನು ಸಮಾಜಕ್ಕೆ ಸೇವೆಯನ್ನು ಸಲ್ಲಿಸುತ್ತ ಸಮಾಜಕ್ಕೆ ತಮ್ಮ ಮಹತ್ವವನ್ನು ತೋರಿಸುತ್ತಿದ್ದಾರೆ **"ಪಂಚಾಳರು ವಾಸಿಸದ ಊರು ಅದು ಒಂದು ಊರೇ ? "** ಇವರಿಲ್ಲದ ಊರು ಇರುವುದಿಲ್ಲ. ಆ ಕರ ಕುಶಲಕರ್ಮಿಗಳಿಗೆ ಅವರು ಜೀವನೋದ್ಯಮ ಅಥವಾ ಕುಲ ಕಸಬಿಗೆ ಬಡಗಿಯರು ತನ್ನದೇ ಆದ ಮಹತ್ವವಾದ ಕಾಣಿಕೆ ಸಲ್ಲಿಸಿದ್ದಾನೆ.

ದೇವಾಲಯಗಳಿಗೆ ದ್ವಾರ, ಬಾಗಿಲು, ಕದಗಳು, ಶಿಲ್ಪ ಚಿತ್ರಗಳು, ಸಾಂಸ್ಕೃತಿಕವಾಗಿ ಇಂದಿಗೂ ಉಳಿದುಕೊಂಡು ಬಂದಿರುವುದನ್ನು ನಾವು ಕಾಣಬಹುದು. ಆ ಕಾರಣಕ್ಕಾಗಿ ಇವರ ಮಹತ್ವವನ್ನು ಹೇಳಬಹುದು.

ಕೃಷಿಕರಿಗೆ ವ್ಯವಸಾಯದ ಉಪಕರಣವನ್ನು ಮಾಡಲು ಬಹುಮುಖ್ಯ. ಬೀಜ ಮತ್ತು ಮರ ಹೇಗೆ ಅಭೇದ್ಯವಿಲ್ಲವೋ, ಹಾಗೆ ಬಡಗಿಯರು ಮತ್ತು ಇತರ ಸಮುದಾಯ ವೆಂದು ಗುರುತಿಸಬಹುದು.

"ಜಗತ್ತಿನ ಸೃಷ್ಟಿಕರ್ತರು" (Makers of the world) ಎಂದು ಈ ವಿಶ್ವಕರ್ಮರನ್ನು ಹೆಸರಿಸಿ ಕರ್ನಾಟಕದಾದ್ಯಂತ ಸಂಚರಿಸಿ 'ಜಾನ್ ಬರೋವರ್' ರವರು ಅಧ್ಯಯನ ಮಾಡಿ ಅವರ ಮಹತ್ವವನ್ನು ವಿವರಿಸಿದ್ದಾರೆ. (ಶಿರಸಂಗಿ ಕಾಳಮ್ಮ - ಗಂಗಾಧರ ದೈವಜ್ಞ).

ನಮ್ಮ ಸಂಸ್ಕೃತಿಯನ್ನು ಅಂದರೆ ಕಲೆ, ಇತಿಹಾಸ ಹಾಗೆ ಹತ್ತು ಹಲವು ಸಂಸ್ಕೃತಿಯನ್ನು ಈ ದೇಶಕ್ಕೆ ಬಂದು ಅಧ್ಯಯನ ಮಾಡಿ ನಮ್ಮನ್ನು ಜ್ಞಾನದ ದಿಗಂತಕ್ಕೆ ಕೊಂಡೊಯ್ಯುವ ಕಾರ್ಯ ಮಾಡಿದವರು ಪಾಶ್ಚಾತ್ಯರು ಎಂದರೆ ಅತಿಶಯೋಕ್ತಿಯಾಗಲಾರದು. ಅವರ ಉದ್ದೇಶ ಬೇರೆ ಇದ್ದರೂ ನಮಗದು ಬೇಡವಾದ ವಿಚಾರ, ಅವರು ಹಾಕಿದ ಬುನಾದಿ ಆದರೂ ನಾವು ಈ ಬುನಾದಿಯ ಮೇಲೆ ನಮ್ಮ ಜ್ಞಾನದಿಂದ ಗೋಪುರ ಕಟ್ಟಿದ್ದೇವೆ.

ಬ್ರಾಹ್ಮಣರು ಕೇವಲ ಲೋಕ ಕಲ್ಯಾಣಕೋಸ್ಕರ ಚಿಂತನೆ ಮಾಡಿದರೆ ವಿಶ್ವಕರ್ಮ ಚಿಂತನೆಯ ಜೊತೆಗೆ ಅದನ್ನೇ ಕ್ರಿಯೆಗೆ ಒಳಪಡಿಸುವುದೇ ಅವರ ಮಾರ್ಗವಾಗಿತ್ತು. ಈ ವರ್ಗದಲ್ಲಿ ಬಡಗಿಯರು ಒಬ್ಬರು.

ಆಗಿನ ಜನರು ಬಹಳ ಬುದ್ಧಿವಂತರು. ಆಗಿನ ಕಾಲದಲ್ಲಿ ಹೊತ್ತಿನ ಮೇಲೆ ಸಮಯವನ್ನು ಹೇಳುತ್ತಿದ್ದರು. ಮೂರು ನಾಲ್ಕು ನಿಮಿಷ ಮಾತ್ರ ವ್ಯತ್ಯಾಸವಾಗುವ ನಿಖರವಾಗಿ ಹೇಳುತ್ತಿದ್ದಾರೆ. ಹಾಗೆ ಬಡಗಿಯರು ನಿಂತ ಮರವನ್ನು ಅಥವಾ ದಪ್ಪನೆಯ ಬಡ್ಡೆಯನ್ನು ನೋಡಿದರೆ ಇದರಲ್ಲಿ ಇವೆ. ಇಷ್ಟೇ ಇಂತಿಂತಹ ಉಪಕರಣಗಳು ಈ ಕಡೆ ಆಗುತ್ತವೆ. ಇಲ್ಲಿ ಕೊರೆದರೆ ಇಂತಹ ಸಾಮಾನುಗಳಿಗೆ ಉಪಯೋಗವಾಗುತ್ತವೆ ಎಂದು ಹೇಳುತ್ತಾರೆ. ಅವರಿಗೆ Technical Maind ಇದ್ದಂತೆ ಇತ್ತು.

ಒಂದು ದಿನ ಕೂರಿಗಿ ದಿಂಡನ್ನು ಕೆತ್ತಿಸಲಿಕ್ಕೆ ಒಬ್ಬ ರೈತ ಬಂದ. ಆವಾಗ ನಮ್ಮಪ್ಪ ಅದನ್ನು ಅಳತೆಗೆ ಕೊರೆ ಎಂದ. ನಾನು ಒಳಗಿಂದ ಟೇಪ್ ತಂದು ಅಳತೆ ಮಾಡುವಾಗ ನಮ್ಮಪ್ಪ ಬಡಗಿಯಾಗಿ ಹುಟ್ಟಬಾರದಿತ್ತು, ಲೇ ಹ್ಯಾಂಗರಾ ಈ ಜಾತ್ಯಾಗ ಹುಟ್ಟಿದಲೇ ನಾಲ್ಕು ದನಗಳನ್ನು ಹೊಡೆದುಕೊಂಡು ಹೋಗು. ಎಂದು ಗೇಣಿನಿಂದ ಅಳೆದು ಇಲ್ಲಿಗೆ ಕೊರೆ ಎಂದರು. ನಾನು ಕೊರೆದೆ ಆ ಮೇಲೆ ನಮ್ಮಪ್ಪ ಚಹಾದಂಗಡಿಗೆ ಹೋದಾಗ ಪರೀಕ್ಷೆ ಮಾಡಲು ಟೇಪ್ ಹಿಡಿದೆ. ಒಂದು ನೂಲು ಕೂಡ ಹೆಚ್ಚು ಕಮ್ಮಿ ಇರಲಿಲ್ಲ. ಆಗಲೇ ಮೆಚ್ಚಿಕೊಂಡಿದ್ದೆ. ಅವರ ತಲೆಯಂಗ ನಮ್ಮ ತಲೆ ಯಾಕೆ ಕೆಲಸ ಮಾಡಲ್ಲ ಎಂದು ಯೋಚಿಸಿದ್ದುಂಟು.

ಒಂದು ಮರವನ್ನು ರೈತ ತಮ್ಮ ಹೊಲಕ್ಕೆ ಇವನನ್ನು ಕರೆದುಕೊಂಡು ಹೋದರೆ ನಿಂತ ಮರವನ್ನು ನೋಡಿ ಹಲ್ಲು, ವಂಕಿ, (ಬುಟೇವು) ಹಾಡಿಗಿ ಹಲ್ಲು, ಒಟಿ, ಮೋಕು, ದಿಂಡು, ನೇಗಿಲು ಇವುಗಳ ಇಂತಲ್ಲಿಗೆ ಕೊರೆದರೆ ವ್ಯವಸಾಯದ ಉಪಕರಣಗಳಾಗುತ್ತವೆ ಎಂದು ಹೇಳುವ ಚಾಣಾಕ್ಷ ಇವರದು. ಇತರರದು ಇಲ್ಲ ಎಂದಲ್ಲ. ಅಲ್ಲಿ ಹಿಂದಿನ ಕಾಲದ ಬುದ್ಧಿವಂತಿಕೆಗೂ ಈಗಿನ ಕಾಲದ ಬುದ್ಧಿವಂತಿಕೆಗೂ ತುಂಬಾ ವ್ಯತ್ಯಾಸ ಇದೆ ಅಂಥಾ ನನ್ನ ಅಭಿಪ್ರಾಯ.

ಹೀಗೆ ಬಡಗಿಯರ ಮಹತ್ವವನ್ನು ಹೇಳಬೇಕಾದರೆ ನಾವು ಅವರ ಬಗ್ಗೆ ಅಧ್ಯಯನ ಮಾಡಿದಾಗಲೇ ಗೊತ್ತಾಗುತ್ತದೆ. ಕ್ಷೇತ್ರ ಕಾರ್ಯಕ್ಕೆ ಇಳಿದಾಗ ನಿಜವಾದ ಮಾಹಿತಿ ತಿಳಿಯಬಹುದು. ಒಂದನ್ನು ಬಿಟ್ಟು ಮತ್ತೊಂದಿಲ್ಲ ಎನ್ನುವ ಹಾಗೆ ಇವರನ್ನು ಬಿಟ್ಟು ಯಾರು ಇಲ್ಲ ಎಂದು ಹೇಳಬಹುದು. ಇವರ ಅವಶ್ಯಕ ಸಮಾಜಕ್ಕೆ ಬೇಕೆ ಬೇಕು ಒಂದು ನಾಣ್ಯದ ಎರಡು ಮುಖ ಹೇಗೆ ಹಾಗೆ ಬಡಿಯರು ಮತ್ತು ಇತರ ಸಮುದಾಯಗಳು ಎರಡು ಮುಖಗಳು ಎಂದು ನನ್ನ ಅನಿಸಿಕೆ.ಈಗ ಆಧುನಿಕರಣದಲ್ಲಿ ಇವರ ಮಹತ್ವ ಕಡಿಮೆಯಾದರೂ ವಿನಾಶದ ಕಾಲದಲ್ಲಿ ಇಲ್ಲ. ಆದರೆ ಇವರ ಜೀವನ ಮಟ್ಟ ಕುಸಿದಿದೆ ಎಂದು ಹೇಳಬಹುದು. ಕಾರಣ ಆಧುನೀಕರಣದ ಬಿರುಗಾಳಿಗೆ ದೇಶೀಯ ತಂತ್ರಜ್ಞಾನಗಳು ಬದಿಗೆ ಸರಿದಿವೆ. ಈ ಎಲ್ಲವುಗಳನ್ನು ಮಹತ್ವ ತಿಳಿಸುವುದರಿಂದ ಕೊಂಚಮಟ್ಟಿಗೆ ಇತರರಿಗೆ ಸಹಾಯಕವಾಗಬಹುದೇನೋ.

ಹೀಗೆ ಅವರ ಮಹತ್ವವನ್ನು ನಾವು ಗುರುತಿಸುತ್ತಾ ಹೋಗುವುದಕ್ಕಿಂತ ಸಮಾಜದಲ್ಲಿದ್ದುಕೊಂಡು ದೇಶೀಯ ತಂತ್ರಜ್ಞಾನ ನೆನೆಸಿಕೊಳ್ಳುವಲ್ಲಿ ಬಡಗಿಯರು ಪ್ರಮುಖ. ಇದರ ಮಹತ್ವ ಸಮಾಜಕ್ಕೆ ತಿಳಿಸುವುದೇ ಅವಶ್ಯವಿಲ್ಲವಾದರೂ ಮುಂದಿನವರಿಗೆ ಕಿಂಚಿತ್ತಾದರೂ ಉಪಯೋಗಕ್ಕೆ ಬರಬಹುದೆಂಬ ಆಶಯ.

<u>ಇದುವರೆಗೂ ನಡೆದ ವಿಶ್ವಕರ್ಮರ ಅಧ್ಯಯನ:</u>

ಇದುವರೆಗೂ ನಡೆದ ಅಧ್ಯಯನ ಮಾಡಿದ ವಿವರಗಳು ನಮಗೆ ವಿಶ್ವಕರ್ಮರ ಪಂಚಾಳರ ಬಗ್ಗೆ ನಡೆದಿರುವುದು ಬೆರಳೆಣಿಕೆಯೂ ಇಲ್ಲ. ಅಂದರೆ ಇತರ ಸಮುದಾಯ ಅಥವಾ ಜನಾಂಗದವರ ಬಗ್ಗೆ ಹಲವಾರು ವಿದ್ವಾಂಸರು ಹಲವಾರು ಸಂಶೋಧಕರು ಒಂದೇ ಜನಾಂಗದಲ್ಲಿಯೇ ಹಲವಾರು ತಮ್ಮನ್ನು ತೊಡಗಿಸಿಕೊಂಡು ಅವುಗಳನ್ನು ಬೆಳಕಿಗೆ ತಂದರು. ಆದು ಕುಶಲಕರ್ಮಿಗಳ ವಿಭಾಗದಲ್ಲೂ ಅಧ್ಯಯನ ನಡೆದರು ವಿಶ್ವಕರ್ಮದಲ್ಲಿ ಪಂಚವೃತ್ತಿಯನ್ನು ಪುರಾತನ ಕಾಲದಿಂದ ಇಂದಿನವರೆಗೂ ಸಮಾಜಕ್ಕೆ ಸೇವೆ

ಸಲ್ಲಿಸುತ್ತ ಬಂದರು. ಅವರು ಸಮುದಾಯದ ಬಗ್ಗೆ ಅಧ್ಯಯನ ಮಾಡಿರುವುದು ಅತಿವಿರಳ. ಅದರಲ್ಲಿ ಬಡಗಿಯ ಪಂರಪರೆಯ ಬಗೆಗೆ ಯಂತೂ ಇಲ್ಲವೇ ಇಲ್ಲವೆಂದು ಹೇಳಬಹುದು. ಅಕ್ಕಸಾಲಿಗರು, ಶಿಲ್ಪಗಾರರು ,ಕಮ್ಮಾರರು ಬಗ್ಗೆ ಅಧ್ಯಯನ ಅಷ್ಟೇ ಇಷ್ಟೆ ನಡೆಸಿದರೂ ಬಡಿಗಿ ಅಥವಾ ಕಾಷ್ಠಾ ಶಿಲ್ಪದ ಬಗ್ಗೆ ಅಥವಾ ಬಡಿಗೆಯ ತಂತ್ರಗಾರಿಕೆಯನ್ನು ಯಾರೂ ಕೈ ಹಾಕದಿರುವುದು ಸೋಜಿಗದ ವಿಷಯ. ಕುಶಲಕರ್ಮಿಗಳನ್ನು ಕೆಲಸ, ವೃತ್ತಿಗಾರರು ಎಂಬ ಪದ್ದತಿಯಲ್ಲೇ ಅಧ್ಯಯನವನ್ನು ಬೆರಳೆಣಿಕೆಯಷ್ಟು ಮಾಡಿದರು. ತಂತ್ರಜ್ಞಾನ ಎಂಬ ಸಮಾನ ಅರ್ಥದಲ್ಲಿ ಯಾರೂ ಅಧ್ಯಯನ ಮಾಡಿಲ್ಲ. ಪರಂಪರೆಯ ಕಲೆಗಾರಿಕೆಯೇ ಈವೊತ್ತಿನ ತಂತ್ರಜ್ಞಾನ ಎಂಬುವುದನ್ನು ಯಾರೂ ದೃಷ್ಟಿಹರಿಸದಿರುವುದು ದುಸ್ಥಿತಿ.

ಸಮಾಜಕ್ಕೆ ತಮ್ಮ ತಂತ್ರಗಾರಿಕೆಯಿಂದ ತನ್ನನ್ನೇ ತಾವು ಅರ್ಪಿಸಿಕೊಂಡಿರುವ ಕುಶಲಕರ್ಮಿಗಳ ಬಗ್ಗೆ ವಿಶಕರ್ಮರು ಪ್ರಮುಖ ಪಾತ್ರ ವಹಿಸುತ್ತಾರೆ. ಕಾಳೆಯವರು ' ದಕ್ಷಿಣ ಕರ್ನಾಟಕ ಕಸಬುಗಳ ಸಮೀಕ್ಷೆ ' (೧೯೬೩) ಲಕ್ಷ್ಮಣರವರು ಅಭಿವೃದ್ಧಿ ಸಂದರ್ಭದಲ್ಲಿ ಗೃಹ ಕೈಗಾರಿಕೆಗಳ ಸ್ಥಿತಿಗಳ ಅಧ್ಯಯನ (ಕೈಗಾರಿಕೆ ಮತ್ತು ಬಡಿಗತನಗಳೊಂದಿಗೆ ಒಳಗೊಂಡು) ೧೯೬೬ರಲ್ಲಿ ' ರಾಜ್ ಪ್ರಮುಖ್, ಪ್ರಸಾದ್‌ರವರು ' ಆಂಧ್ರ ಪ್ರದೇಶದಲ್ಲಿ ವಿಶ್ವಕರ್ಮ ಔದ್ಯೋಗಿಕ ಚಲನೆಯ ಮೇಲುನ ಲೇಖನ

ಭಾರತದಲ್ಲಿ ಬ್ರಾಹ್ಮಣರು ಮತ್ತು ಒಕ್ಕಲಿಗರು ಮತ್ತು ಬುಡಕಟ್ಟು ಸಮಾಜದಲ್ಲಿ ಪಡೆದಷ್ಟು ಗಮನವನ್ನು ಕುಶಲಕರ್ಮಿಗಳು ಪಡೆದಿಲ್ಲ ಎಂದು ಹೇಳಬಹುದು. ಬರೀ ಭಾಷಣ, ವಿಚಾರಗೋಷ್ಠಿ ಸಭೆ ಸಮಾರಂಭಗಳಲ್ಲೇ ಇವುಗಳು ಉಳಿದುಕೊಂಡು ಬಂದಿವೆ. ಅದರಲ್ಲೂ ಪ್ರಮುಖವಾಗಿ ಬಡಿಗೆಯ ಸಮುದಾಯವು ಒಂದು ವಿಶ್ವಕರ್ಮ ಸಮುದಾಯ. ಕಲಾ, ಐತಿಹಾಸಿಕ ಮತ್ತು ಇಂಡಾಲಿಜಿಕಲ್ ಕೃತಿಗಳು, ಕುಶಲಕರ್ಮಿಗಳು, ಉತ್ಪನ್ನಗಳು, ಅವುಗಳ ಸೌಂದರ್ಯ, ರಚನೆ ಭಾರತದಲ್ಲಿ ಕಸಬುದಾರರ ನಾಜೂಕುದಾರರ ಮತ್ತು ನೈಪುಣ್ಯತೆ ಮತ್ತು ಕೌಶಲ್ಯ, ಮತ್ತು ವಾಸ್ತು ಶಿಲ್ಪಗಳ ಸಂಕೇತವಾಗಿ ಬಡಿಗಿ ಬಂದರೂ ಜೊತೆಗೆ ನೋಡುಗರ ಗಮನ ಸೆಳೆಯುತ್ತವೆ. ದಕ್ಷಿಣ ಕರ್ನಾಟಕದ ವಿಶ್ವಕರ್ಮರನ್ನು ಕುರಿತು ವಿಶೇಷವಾಗಿ ಅಧ್ಯಯನ ಮಾಡುವ ಶ್ರೀ ಶ್ರೀನಿವಾಸರು ಈ ರೀತಿ ಅಭಿಪ್ರಾಯಪಡುತ್ತಾರೆ. 'ವಿಶ್ವಕರ್ಮ ಉಪ ಜಾತಿಗಳು ತನ್ನದೇ ಆದ ಪ್ರತ್ಯೇಕ ಸ್ವಗೋತ್ರ ವಿವಾಹದ ಗುಂಪುಗಳು ಹಾಗೆ ಔದ್ಯೋಗಿಕವಾಗಿ ವಿಭಾಗವನ್ನು ರಚಿಸಿಕೊಂಡಿದ್ದರಿಂದಾಗಿ ಅವು ಸಾರ್ವತ್ರಿಕವಾಗಿ ಗುಂಪುಗಳನ್ನು ಪ್ರತಿನಿಧಿಸದೇ ಹೋದವು 'ಎನ್ನುತ್ತಾ ವಿಶ್ವಕರ್ಮರು ಎಡಗೈಗಳಜೊತೆಗೆ ಸೇರಿಸಿದ್ದಾಗಿ ತಿಳಿಸಿದ್ದಾರೆ.

ವಿಶ್ವಕರ್ಮ ಕುರಿತು 'ಮಂಡೇಲ್ ಬಾವನ್‌ರವರು' ಗಮನಿಸಿದಂತೆ ಶ್ರೇಣೀಕರಣ ವ್ಯವಸ್ಥೆಯಲ್ಲಿ ವಿಶ್ವಕರ್ಮರು ಹೊಂದಿದ್ದ ಮತ್ತು ತ್ಯಜಿಸಿದ ವ್ಯತ್ಯಾಸಗಳನ್ನು ಗುರುತಿಸುತ್ತಾರೆ. ಇವರು ತಮ್ಮ ಅದ್ಯಯನದಲ್ಲಿ ವಿಶ್ವಕರ್ಮರು ಆರ್ಥಿಕ ವಿವರಣೆಯನ್ನು ಆಯ್ದುಕೊಂಡಿದ್ದಾರೆ. ಆರ್ಥಿಕ ವ್ಯವಸ್ಥೆಯಲ್ಲಿ ತಮ್ಮ ಪತೋಟಿಯನ್ನು ವಿಶ್ವಕರ್ಮರು ಸಾಧಿಸಿದ್ದುದಾಗಿದೆ. ಇವರು ಆಚರಣಾತ್ಮಕವಾಗಿ ಶುದ್ಧರು ಮತ್ತು ಪ್ರತ್ಯೇಕವಾಗಿರಲು ಆಶಿಸುವರು ಆಗಿರುವುದನ್ನು ಕುರಿತು ಗಮನಹರಿಸಲು ಪ್ರಯತ್ನಿಸಿದ್ದಾರೆ.

ದಕ್ಷಿಣ ಏಷಿಯಾಕ್ಕೆ ಸಂಬಂಧಿಸಿದಂತೆ ಪಾಂಚಾಲರು (Smiths) ಕುರಿತು ಮೊದಲ ಬಾರಿಗೆ ಮಾಹಿತಿ ದೊರೆಯುವ ಪುಸ್ತಕ "ನಾಕ್ಸ್" (Knoxs) "Historical Relatior of the gland silon" ಈ ಕೃತಿಯಲ್ಲಿ೧೯ ನೇ ಶತಮಾನದಲ್ಲಿಯ ಸಿಲೋನಿನ ಕಮ್ಮಾರ, ಬಡಿಗೇರ, ಹಾಗೂ ಅಕ್ಕಸಾಲಿಗರ ಸ್ಥಿತಿಗಳ

ಮಾಹಿತಿ ಈ ಕೃತಿಯಲ್ಲಿ ವಿವರವಾಗಿ ಸಿಗುತ್ತವೆ ಎಂಧು ಕುಮಾರಸ್ವಾಮಿಯವರು ತಿಳಿಸಿದ್ದಾರೆ.

ಈ ಕೃತಿಯ ನಂತರ ಸುಮಾರು ೧೨೫ ವರ್ಷಗಳ ತರುವಾಯ ಎರಡು ಪ್ರಮುಖ ಕೃತಿಗಳು ಸಿಗುತ್ತವೆ. ಅವುಗಳು ಡುಬೆ (Dubais) ಅವರ ' ಹಿಂದೂ ಮ್ಯಾನರ್ಸ್ ಕಸ್ಟಮ್ಸ್ ಅಂಡ್ ಸೆರೆಮೋನಿಸ್ ', ಬುಕಾನಾನ್‌ರವರ 'ಜರ್ನಿ ಫ್ರಂ ಮದ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರು ಕೆನರಾ ಅಂಡ್ ಮಲಬಾರ್' ಕೃತಿಗಳಲ್ಲಿ ಪಾಂಚಾಲರು ಬ್ರಾಹ್ಮಣರ ಪ್ರಾಧಾನ್ಯತೆಯನ್ನು ಒಪ್ಪಿಕೊಳ್ಳದೇ ತಿರಸ್ಕರಿಸುವುದನ್ನು ಡುಬೆಯವರು ತಿಳಿಸುತ್ತಾರೆ. (೧೯೭೮-೨೩) ಹಾಗೆ ಜನಿವಾರದ ಉಪಯೋಗ ಕುರಿತು ಚರ್ಚಿಸಿದ್ದಾರೆ.

ಬುಕಾನಾನ್‌ರವರು ತಮ್ಮ ಕೃತಿಯಲ್ಲಿ ಪಂಚಾಲರ ಕುರಿತು ತಿಳಿಸುವಾಗ ಪಾಂಚಾಲರು ಶೂದ್ರರಲ್ಲಿಯೇ ಕೆಳವರ್ಗದವರೆಂದು ಬ್ರಾಹ್ಮಣರಿಂದ ಪರಿಗಣಿಸಲ್ಪಟ್ಟಿದ್ದರು. ಮುಂದುವರೆದು ವಿಶ್ವಕರ್ಮ, ಕಾಳಿಕಾದೇವರ ಮೂಲವೆಂದು ತಮ್ಮನ್ನು ಕರೆದುಕೊಳ್ಳುತ್ತಾರೆಂದು ತಿಳಿಸಿದ್ದಾರೆ. ಈ ಇಬ್ಬರು ವಿದ್ವಾಂಸರು ದಕ್ಷಿಣ ಜಾತಿ ಪದ್ಧತಿಯಲ್ಲಿ ಎಡಗೈ ಮತ್ತು ಬಲಗೈ ಜಾತಿ ವಿಂಗಡಣೆಯ ಸಂಕೀರ್ಣತೆ ಮತ್ತು ಪಂಚಾಲರ ಎಡಗೈ ಸಮುದಾಯಗಳ ಮುಂದಾಳುತನ ವಹಿಸಿರುವುದರ ಕುರಿತು ವಿವರವಾಗಿ ವಿವರಿಸಿದ್ದಾರೆ.

ಇವರ ನಂತರ ಒಂದು ನೂರು ವರ್ಷಗಳ ನಂತರ **ಎಡ್ವರ್ಡ್ ಥರ್ಸ್ಟನ್‌**ರವರು ವಿಶ್ವಕರ್ಮ ಸಮುದಾಯಗಳ ಕುರಿತು ಹೆಚ್ಚಿನ ಬೆಳಕು ಚೆಲ್ಲಿದ್ದಾರೆ. ವಿಶ್ವ ಬ್ರಾಹ್ಮಣ, ವಿಶ್ವಕರ್ಮ ಪದಗಳು ಶಿಲ್ಪಿಗಳ ದಿವ್ಯವಾದ ವಿಶ್ವಕರ್ಮನ ಐದು ಮುಖಗಳಿಂದ ಹುಟ್ಟಿದ ಐದು ವರ್ಗವೆಂದು ಅವರನ್ನು ಪಂಚಾಲರು ಎಂದು ಕರೆಯುತ್ತಾರೆ. (ಸಂಪುಟ (VII :೪೧೨) ಎಂದು ತಿಳಿಸಿದ್ದಾರೆ. ಕೆಲವು ಜಿಲ್ಲೆಗಳಲ್ಲಿ ಬ್ರಾಹ್ಮಣರನ್ನು ಬ್ರಾಹ್ಮಣರೆಂದು ತಮ್ಮನ್ನು ವಿಶ್ವ ಬ್ರಾಹ್ಮಣರೆಂದು ಕರೆದುಕೊಳ್ಳುತ್ತಾ ತಮ್ಮನ್ನೇ ಬ್ರಾಹ್ಮಣರಿಗಿಂತ ಶ್ರೇಷ್ಠ ಎಂದು ಹೇಳಿಕೊಂಡಿರುವುದನ್ನು ಗುರುತಿಸಿದ್ದಾರೆ. (ಸಂಪುಟ III :೧೧೩) ಸಂಗ್ರಹಿಸಿದ ಮಾಹಿತಿಗಳು ಬಹುತೇಕವಾಗಿ ಪರಿಪೂರ್ಣವೆಂದು ಹೇಳಬಹುದಾಗಿದೆ.

ಆರು ದಶಕಗಳ ನಂತರ "ಪಂಚಾಲ ಕುಶಲ ಕರ್ಮಿಗಳ" ಅಧ್ಯಯನಕಾರರ ಗಮನ ಸೆಳೆದರು. **ಟ್ರಾಂಕ್ವೆಬಾರಿನ ಎಫ್ ಜೆ.ಲೀಫರ್** (F.J.Leefer) ರವರ ಇಂಡಿಯನ ಎಂಟಿಕ್ವರಿಯ ಓದುಗರಿಗೆ ಹಲವು ಸಮಸ್ಯಗಳನ್ನು ಮುಂದಿಡುತ್ತಾ ಪಂಚಾಲರುರು ಬ್ರಾಹ್ಮರಂತೆ ಜನಿವಾರರನ್ನು ಏಕೆ ಧರಿಸಿದ್ದಾರೆ .ಈ ಪದ್ಧತಿಯ ಉಗಮಕ್ಕೆ ಕಾರಣವೆನಿರಬಹುದು ಎಂದು ಪ್ರಶ್ನೆಗಳನ್ನೆತ್ತಿದ್ದಾರೆ (೧೮೭೨-೨೧೪)

ಕುಮಾರಸ್ವಾಮಿಯವರ .Stady of Indian crapteman (೧೯೧೯) ಕೃತಿ ಯಲ್ಲಿ ಕುಶಲಕರ್ಮಿಗಳು ಪಂಚಾಲರ ಆಶ್ರಯಧಾತರು ಮತ್ತು ಪಂಚಾಲರ ಸಮಾಜಿಕ ಶ್ರೇಣಿಯ ಕಡೆಗೆ ಹೆಚ್ಚಿನ ಗಮನ ಹರಿಸಲಾಗಿದೆ ಇವರು ಮೂಲತಃ ಭೂಗರ್ಭ ಶಾಸ್ತ್ರಜ್ಞಾರಾಗಿದ್ದರು ವಿಲಿಯಂಮೋರಿಸ ರವರ ಪ್ರಭಾವದ ಫಲವಾಗಿ ಸಿಲೋನಿನ ಸಾಂಪ್ರದಾಯಿಕ ಕಲೆ ಹಾಗೂ ಕಸಬುಗಳ ಅಧ್ಯಾಯನಕ್ಕೆ ಸಂಬಂಧಿಸಿದಂತೆ ವಿಶೇಷ ಆಸಕ್ತಿಯನ್ನು ಎಂದು ' ರೋಜರ ಲಿಪ್ಪ 'ಯವರು ಅಭಿಪ್ರಾಯ ಪಡುತ್ತಾರೆ

ಕುಮಾರಸ್ವಾಮಿಯವರ 'ಮಿಡಿವಲ ಸಿಂಹಳೀ ಆರ್ಟ್ಸ' (೧೯೦೮) ಕೃತಿಯಲ್ಲಿ ಭಾರತ ಮತ್ತು ಸಿಲೋನಿನ ಕಲೆಯ ಕುರಿತು ಹೆಚ್ಚಿನ ಗಮನ ಹರಿಸಿದ್ದಾರೆ ಅನೇಕರು ಪ್ರಾಚೀನ ಸಂಸ್ಕೃತಿ ಮತ್ತು ನಾಗರಿಕತೆಗಳ ಕುರಿತು ಹೆಮ್ಮೆಯಿಂದ ಮಾತನಾಡುತ್ತಿದ್ದಾರೆ ಈ ಸಂಸ್ಕೃತಿ ಮತ್ತು ನಾಗರಿಕತೆಗಳನ್ನು ಕಟ್ಟಲು ಶ್ರಮಿಸಿದ ವಿಶ್ವಕರ್ಮ ಕಲಾವಿದರ ಕುರಿತು ತಿಳಿದುಕೊಳ್ಳುವ ವ್ಯವದಾನಕ್ಕೆ ಹೋಗಿಲ್ಲವೆಂದು ತಿಳಿಸುತ್ತಾರೆ

R. V. ರೆಸೆಲ ಮತ್ತು R. E ಏಂಥೋವಿನ ರವರ ಪಂಚಾಚರ ಸ್ಥಾನಮಾನಗಳಕುರಿತು ಸರಿಯಾದ ರೀತಿಯಲ್ಲಿ ಗ್ರಹಿಸಿಲ್ಲವೆಂದು ಹೇಳಬಹುದು ಇವರು ಪಂಚಾಲರ ಬಗೆಗೆ ತಿಳಿಯಲು ಅಸಮರ್ಥರಾಗಿದ್ದರೇನೋ ಎನಿಸುತ್ತದೆ.

ಪಂಚಾಲರು ತಾವು ಬ್ರಾಹ್ಮಣರಿಗೆ ಸಮಾನರೆಂದು ಭಾವಿಸುತ್ತಾ ತಮ್ಮನು ವಿಶ್ವಬ್ರಾಹ್ಮಣರೆಂದು ಕರೆದು ಕೊಂಡಿದ್ದನ್ನು ಗಮನಿಸಿ ಸುಮಾರು ೧೦೩೩ರ ಶಾಸನವನ್ನು ಆಧಾರಿಸಿ ಪಂಚಾಲರು ಅತಿ ಕೆಳವರ್ಗದವರಾಗಿದ್ದು ಇವರು ಕೇವಲ ಹಳ್ಳಿಗಳಲ್ಲಿ ವಾಸಿಸುವವರಾಗಿದ್ದರು ಎಂದು ಅಭಿಪ್ರಾಯ ಪಡುತ್ತಾರೆ

೧೯೨೮ ರಲ್ಲಿ L.A.K ಅಯ್ಯರ ಒಂದು ಪ್ರಕರಣವನ್ನು ನೋಡಿ ತಮ್ಮ 'ಕಾಸ್ಟ ಅಂಡ ಟ್ರೈಬ್ಸ ಇನೆ ಮೈಸೂರು ಸ್ಟೇಟ ಕೃತಿಯಲ್ಲಿ ತಾವು ಬ್ರಾಹ್ಮಣರಿಗಿಂತ ಹೆಚ್ಚಿನವರೆಂದು ಹೇಳುವ ಪಂಚಾಳರು ಒಂದು ಹೆಜ್ಜೆ ಮುಂದೆ ಹೋಗಿ ಸಾವು ಇರದ ಬ್ರಹ್ಮನಿಂದ ನೇರವಾಗಿಯೇ ಸೃಷ್ಠಿಗೊಂಡವರು. ಆದರೆ ಬ್ರಹ್ಮಣರು ಸಾವಿಗೀಡಾದ ಹೆಚ್ಚಿನ ಸ್ಥಾನವನ್ನು ಹೊಂದಿದವರು ಎಂದು ಪಾಂಚಾಲರು ನೀಡಿದ ಹೇಳಿಕೆಯೊಂದನ್ನು ತಮ್ಮ ಕೃತಿಯಲ್ಲಿ ಐಯ್ಯರ್‌ವರು ದಾಖಲಿಸಿದ್ದಾರೆ. (೧೯೩೫ IV ೪೨೫ )

ಐಯ್ಯರವರು ಪಂಚಾಲರ ಕುರಿತು ಕೆಲವು ಆಸಕ್ತಿದಾಯಕ ದಾಖಲೆಗಳನ್ನು ತಮ್ಮ ಕೃತಿಯಲ್ಲಿ ಕೊಟ್ಟಿದ್ದಾರೆ ವಿಶ್ವಕರ್ಮರಲ್ಲಿ ಉಪಜಾತಿಗಳು ಕಂಡುಬಂದರೂ ಅವರು ತಮ್ಮ ಉಪಜಾತಿಗಳಿಗೆ ಮೀಸಲಾದ ವೃತ್ತಿಯ ಹೊರತಾಗಿಯೇ ತಿಳಿಸಿತ್ತಾರೆ.

G. K ಪಿಳ್ಳೆ **The way of the silpi** ಎನ್ನುವ ಕೃತಿಯಲ್ಲಿ ಕುಶಕರ್ಮಿಗಳು ವಿಶ್ವಕರ್ಮನ ಮೂಲದಿಂದ ಜನಿಸಿದರು ಎನ್ನುವ ಹೇಳಿಕೆಯೊಂದಿಗೆ ಪ್ರಾರಂಭವಾಗುತ್ತದೆ ೧೯೬೮ರಲ್ಲಿ ' ಈಸ್ಟ್ರನ್ ಅಂಥ್ರೋಪಾಲಜೀಸ್ಟ್ 'ಕೃತಿ ಬೆಳಕಿಗೆ ಬಂತು ಈ ಕೃತಿಯಲ್ಲಿ ಪಂಚಬ್ರಹ್ಮ ವಿಶ್ವಕರ್ಮನ ಪುರಾಣಗಳ ಕುರಿತು ವಿವರಣೆ ಸಿಗುತ್ತದೆ ವಿಶ್ವಕರ್ಮರ ಮೌಖಿಕ ಸಂಪ್ರದಾಯದ ಪ್ರಮುಖ ಕಥೆಗಳ ವಿಶ್ಲೇಷಕರಲ್ಲಿ T. R ಸಿಂಗ್ ರವರೇ ಮೊದಲಿಗರೆನಿಸುತ್ತದೆ. ತಾವು ಬ್ರಾಹ್ಮಣರೆಂದು ಸಾದಿಸಲು ಹೊರಟ ಪಂಚಾಲರ ಸ್ಥಿತಿ ಮತ್ತ ವ್ಯವಸ್ಥೆಯಲ್ಲಿ ಇವರಿರುವ ನೈಜಸ್ಥಿತಿಗಳ ಮಧ್ಯದಲ್ಲಿ ಹುಟ್ಟಿದ ಹಲವು ಪ್ರಶ್ನೆಗಳಿಗೆ ಉತ್ತರಿಸುವ ಪ್ರಯತ್ನ ಮಾಡಿದ್ದಾರೆ.

ಹಾಲೆಂಡ್ ಮೂಲದ ಮಾನವ ಶಾಸ್ತ್ರಜ್ಞರಾದ ' ಜಾನ್ ಬ್ರೊವರ್ 'ರವರು ೧೯೮೫ ರ ಸುಮಾರಿಗೆ ದಕ್ಷಿಣ ಭಾರತದ ಕುಶಲಕರ್ಮಿ ಪಂಚಾಲ ಸಮುದಾಯಗಳ ಕುರಿತು ಅಧ್ಯಾಯನ ಕೈಗೊಂಡರು

ಇವರು ಸುಮಾರು ಹತ್ತು ವರ್ಷಗಳ ಕರ್ನಾಟಕದಲ್ಲಿ ಸಂಚರಿಸಿ ಕುಶಲಕರ್ಮಿ ಪಂಚಾಲ ಸಮುದಾಯಗಳು ಅವರ ಉಪಜಾತಿ ಅವರ ಮಧ್ಯ ಇರುವ ವೈರುದ್ಯಗಳು ಅವರ ಕಸಬು ಕಸಬಿಗೆ ಸಂಬದಿಸಿದ ನಂಬಿಕೆಗಳು ಉಪಜಾತಿ ಸಮುದಾಯಗಳ ಒಳ ಪಂಗಡಗಳು ಮುಂತಾದವುಗಳ ಕುರಿತು ಪರಿಪೂರ್ಣವಾಗಿ ತಮ್ಮ ಸಂಶೋಧನಾ ಕೃತಿ Makers of world ರಲ್ಲಿ ವಿವರಿಸಿದ್ದಾರೆ. ಈ ಕೃತಿ ಕರ್ನಾಟಕದ ಪಂಚಾಲರ ಸಮಗ್ರ ಪಂಚಾಂಗದಂತಿರುವ ಮಾಹಿತಿಯನ್ನು ದೊರಕಿಸಿಕೊಡುವ ಸಂಶೋಧನ ಕೃತಿಯಾಗಿದೆ

ವಿದೇಶಿ ವಿದ್ವಾಂಸರು ಅದ್ಯಾಯನ ಮಾಡಿದಂತೆ ಕನ್ನಡದಲ್ಲಿ ವಿವರಣಾತ್ಮಕವಾಗಿ ಸಂಶೋಧನೆ ನೆಡದ ಉದಾಹರಣೆಗಳು ದೊರೆಯುವುದು ಕಷ್ಟ. ಪಿ. ವಿ. ಕುಮಾರಸ್ವಾಮಿಯವರು ' ಮಧ್ಯಕಾಲಿನ ಕರ್ನಾಟಕದ ಶಾಸನಗಳಲ್ಲಿ ಶಿಲ್ಪಚಾರಿಗಳು ' ಉನ್ನತ ಸಂಶೊಧನಾ ಕೃತಿ ಕನ್ನಡದಲ್ಲಿ ೧೯೯೧ ರಲ್ಲಿ ಪ್ರಕಟಗೊಂಡಿದೆ. ಈ ಕೃತಿಯಲ್ಲಿ ಸಂಶೋದಕರು ಶಾಸನಗಳಲ್ಲಿ ಎಲ್ಲೆಲ್ಲಿ ಪಂಚಾಲರ ಕುರಿತು ಉಲ್ಲೇಖಗಳು ದೊರೆಯುತ್ತವೆ ಎನ್ನುವ ಕುರಿತು ನೋಡಿದ್ದಾರೆ ಆ ಮೂಲಕ ಮಧ್ಯಕಾಲಿನ ಕರ್ನಾಟಕದಲ್ಲಿಯ ಪಂಚಾಲರ ಸ್ಥಿತಿಗತಿಗಳನ್ನು ಗುರಿತಿಸಲು ಪ್ರಯತ್ನಿಸಿದ್ದಾರೆ

೧೯೯೧ ರಲ್ಲಿ ರಾಜಶೇಖರ ಬಡಿಗೇರರವರ ' ಸತ್ಯನ್ವೇಷಣೆ ' ಎನ್ನವ ಸಂ ಪ್ರಭಂಧಗಳ ಕೃತಿ ಪ್ರಕಟ ಗೊಂಡಿದೆ ನನ್ನಿವಾಳ ಆಚಾರ್ಯರು ತೆಲುಗಿನಿಂದ ಆನುವಾದಿಸಿದ೧೮೧೮ ರ 'ಚಿತ್ತೂರು ಜಿಲ್ಲಾ ಅದಾಲಿತ ಕೋರ್ಟಿನ ತೀರ್ಪು'ಎನ್ನುವ ಕೃತಿ ಪರೋಕ್ಷವಾಗಿ ಬ್ರಾಹ್ಮಣ ಮತ್ತು ಪಂಚಾಲರ ಮದ್ಯ ವೈಶಮ್ಯಗಳಿಗೆ ಕಾರಣಗಳೇನು ಎಂಬುವುದನ್ನು ತಿಳಿಸುತ್ತದೆ
ಇದರಲ್ಲಿ ಬ್ರಾಹ್ಮಣರಿಗಿಂತ ಹೆಚ್ಚಿನವರೆಂದು ತೀರ್ಪಾದುದನ್ನು ತಿಳಿಸುತ್ತ ತಮ್ಮ ಜಾತಿಯ ಬ್ರಾಹ್ಮಣ ಜಾತಿಗಿಂತ ಹೆಚ್ಚಾದುದು ಎಂದು ನಿರೂಪಿಸಲು ಪ್ರಯತ್ತಿಸಿದ್ದಾರೆ ತಾವೆ ವಿಶ್ವಕರ್ಮ ವಿಶ್ವಬ್ರಾಹ್ಮಣರು ಎಂದು ನಿರೂಪಿಸಿದ್ದಾರೆ.

ಪಂಚಾಳರ ಬಗೆಗೆ ಅತಿ ಹೆಚ್ಚು ಅದ್ಯಾಯನ ಮಾಡಿದವರೆಂದರೆ ಜಿ. ಜ್ಞಾನನಂದರು ಪ್ರಮುಖರು ವೈದಿಕ ಪರಂಪರೆಯೊಂದಿಗೆ ಪಂಚಾಲ ಸಮುದಾಯಗಳನ್ನು ಗುರಿತಿಸುವ ಪ್ರಯತ್ನ ಮಾಡಿದ್ದಾರೆ. ಇವರ ಹಲವಾರು ಕೃತಿಗಳು ವಿಶ್ವಕರ್ಮ ಪೂಜೆತತ್ವ ಭಾರತೀಯ ಸಂಸ್ಕೃತಿಗೆ ವಿಶ್ವಕರ್ಮ ಕೊಡಿಗೆ ವಿಶ್ವಬ್ರಾಹ್ಮಣರು ಯಾರು? ವಿಶ್ವಕರ್ಮ ಸೂಕ್ತ ಒಂದು ಅದ್ಯಾಯನ ಹೀಗೆ ಹತ್ತು ಹಲವಾರು ಕೃತಿಗಳನ್ನು ರಚಿಸಿದ್ದಾರೆ ಡಾ: ಜಿ. ವಿ. ದಿಷಿತ್. ವಾಸುದೇವ ಬಡಿಗೇರ ಹೀ॥ ಹಲವಾರು ವಿದ್ವಾಂಸರು ಪಂಚಾಳರ ಸಂಶೋದನ ಮಾಡಿದರೂ ಬಡಗಿ ವೃತಿಗೆ ಸಂಬಂದಪಟ್ಟ ಸಂಶೋದನ ಕೃತಿಗಳು ಹೊರ ಬರದೇ ಇರುವುದು ಸೋಜಿಗದ ವಿಷಯವಾಗಿದೆ ಯಾಕೆ ಈ ವೃತ್ತಿಯವರು ನಿರ್ಲಕ್ಷ್ಯಕ್ಕೆ ಒಳಗಾಗಿದ್ದಾರೆ ? ಎಂದು ಇತ್ಯಾದಿ ಪ್ರಶ್ನೆಗಳು ನಮ್ಮೆದುರಿಗೆ ಕ್ಷಣ ಕಾಲ ಮಿಂಚಿನಂತೆ ಹಾದು ಹೋಗಿವೆ ಆ ಕಾರಣಕ್ಕಾಗಿಯೇ ನಾನು ಸಂಶೋಧನ ಕೃತಿಯಲ್ಲಿ ಹೊಸ ತಾಂತ್ರಿಕ ದೃಷ್ಠಿಕೋನದಿಂದ ಅಧ್ಯಾಯನ ಮಾಡಲು ಪ್ರಯತ್ನಿಸಿದ್ದೇನೆ.

# ೨. ಬಡಗಿ ಸಮುದಾಯದ ಮೂಲ.

## ೨.೧ ಬಡಿಗ ಶಬ್ದದ ಉತ್ಪತ್ತಿ

ಕರಕುಶಲಕಾರರು ತಾವು ನಿರ್ಮಿಸಿರುವ ಕುಲಕಸಬುಗಳಿಂದ ತಮ್ಮ ವೃತ್ತಿ ನಾಮಗಳ ಹೆಸರು ಪಡೆದಿದ್ದಾರೆ. ಹಾಗೆ ಎಲ್ಲಾ ವೃತ್ತಿ ನಾಮಗಳಂತೆ ಬಡಗಿ ಎಂಬ ಶಬ್ದದ ಉತ್ಪತ್ತಿಯನ್ನು ನಾವು ತಿಳಿಯಬಹುದು, ಬಡಗಿ ಬಡಿಗಿ, ಬಡಿಗಾರ - ಬಡಿಗ್ಯಾರ ಎಂಬ ಕನ್ನಡದ ಶಬ್ದಗಳು ಸಂಸ್ಕೃತದ ವರ್ಧ (ಕತ್ತರಿಸು, ಕಡಿ) ವರ್ಧಕಿ - ವಡ್ಡಕ್ಕಿ - ಬಡ್ಡಕಿ (ಗಿ) ಬಡಗಿ ಮುಂತಾಗಿ ಬೆಳೆದು ಬಂದಿರಬಹುದೆಂಬುದನ್ನು ಚಾರಿತ್ರಿ ಪ್ರಯೋಗಗಳನ್ನು ಗಮನಿಸಿದರೆ ಬಡಗಿ - ಬಡಗಿ ( ಬಡಿ- ಕಿ (ಗಿ) ) ಅಚ್ಚ ಕನ್ನಡವೆಂದು ತೋರುತ್ತದೆ. ಬಡಿಗಿ :- ಬಡೆಯುವುವನು ಬಡಗಿ ಎಂದು ಕರೆಯುತ್ತಾರೆ. ಅದು ಸಂಸ್ಕೃತಕ್ಕೆ ಬಾಷಾಂತರವಾಗುವಾಗ ವರ್ದಕಿ ಅಗಿರಬಹುದು ಇವೆರಡು ಸ್ವತಂತ್ರವಾಗಿಯೂ ಇವರೆಡು ರೂಪಿತ ವಾಗಿರುವ ಸಾದ್ಯತೆಗಳಿವೆ.

★ ಬಡಗಿ ಎಂಬ ಶಬ್ದಗಳು ಶಾಸನ ಪುರಾಣಗಳಲ್ಲಿ ನೋಡಬಹುದು. ಹೊಯ್ಸಳ ಬಲ್ಲಾಳನ ಕಾಲದ ಕ್ರಿ.ಶ.೧೦೦೨ ಕೊಲ್ಲಾಪುರದ ತಾಮ್ರಶಾಸನದಲ್ಲಿ "ಹಿಟ್ಟಿಕಾರ ಬಡಿಗಿ ಹಿಲೇಜಿಗೆ ಮತ್ತರು ಳ.........." ಭೂಮಿಯ ಧಾನಪಡೆದ ವಿವರಗಳಿವೆ.

★ ಚಿಕ್ಕ ಹಂದಿಗೋಳ ಗ್ರಾಮದ ಶಿಲಾಶಾಸನದಲ್ಲಿ ಬಡಗಿ ಎಂಬ ಶಬ್ದವನ್ನು ನೋಡಬಹುದು.

★ ಧಾರವಾಡ ಜಿಲ್ಲೆಯ ಹೊಸೂರು ಗ್ರಾಮದ ಕ್ರಿ.ಶ. ೧೧೮೬ ರ ಶಿಲಾಶಾಸನದಲ್ಲಿ '....ಬಡಗಿ

ಕಾಲೋಜ ಮೋರಕೇಶ್ವರ ......'ಂಬುದನ್ನು ನಾವು ನೋಡಬಹುದು.

ಶಾಸನ ಮತ್ತು ತಾಮ್ರ ಶಾಸನಗಳಿಂದಲೇ ಮಾತ್ರವಲ್ಲ ಸರ್ವಜ್ಞ ನ ವಚನಗಳು ಜಾನಪದ ಹಾಡುಗಳಲ್ಲಿಯೂ ಅವರ ಶಬ್ದವನ್ನು ನಾವುಕಾಣಬಹುದು

ಹಡಗು ಕಡಲಿಗೆ ಬೇಕು ಗುಡುಗು ಮಿಂಚಿಗೆಬೇಕು
ಕಡುಗಾದ ಕೈಯ ಸೊಸೆಬೇಕು ! ಊರಿಂದ
ಬಡಿಗಿ ತಾ ಬೇಕು ಸರ್ವಜ್ಞ

ಎಂಬುದನ್ನು ನೊಡಿದರೆ ಅವರ ಪ್ರಾಚೀನತೆ ಗೊತ್ತಾಗುತ್ತದೆ.

**೨.೨ ಬಡಗಿ ಪುರಾಣದ ಪ್ರಕಾರ :**

ಗ್ರಾಮ ಜೀವನದ ಕ್ರಿಯಾಶೀಲ ಜನಾಂಗದ ಬಡಿಗೇರು (ಪಂಚಾಳು) ತಮ್ಮ ದೇ ಆದ ತತ್ವ ವಿವೇಚನೆ ನಡೆ-ನುಡಿ ನಂಬಿಕೆಗಳನ್ನು ಬಿಂಬಿಸುವವಿಶಿಷ್ಟ ಜನ ಸಮುದಾಯವಾಗಿದ್ದಾರೆ. ವಿಶ್ವಕರ್ಮ ವಿಶ್ವ ಬ್ರಾಹ್ಮಣ ಎಂದು ಗೌರವಾನ್ವಿತವಾಗಿ ಕರೆದುಕೊಳ್ಳುವ ಪಂಚಾಳರಲ್ಲಿ ಸಾಮಾನ್ಯವಾಗಿ ಏಕ ಪ್ರಕಾರದ ನಂಬಿಕೆ ಆಚರಣೆಗಳಿವೆ. ಅವರವರ ವೃತ್ತಿಗಳಲ್ಲಿ ವ್ಯತ್ಯಾಸಗಳಿದ್ದರೂ, ಗೋತ್ರ ಮೂಲವಾದ ಪಂಥ ಪಂಗಢಗಳಿದ್ದರೂ ಪಾಂಚಾಳರು ಎಲ್ಲದರಲ್ಲಿ ಒಂದೇ ಆಗಿರುವ ಜನರು ಈ ಜನಾಂಗದ ಬಗೆಗೆ ಸಂಸ್ಕೃತದ ' ಮೂಲಸ್ತಂಭ ಪುರಾಣ ಕಾಳಹಸಂಚಾರ್ಯನ 'ವಿಶ್ವಕರ್ಮ ಪುರಾಣ ' 'ರಥಾಧಿಕರಣ ' ತೆಲುಗು ಮುಂತಾದ ಗ್ರಂಥಗಳನ್ನು ಪಂಡಿತರು ಹೆಸರಿಸಿದ್ದಾರೆ.

ಜಗತ್ತಿನ ವಿಶ್ವಕರ್ಮನ ಶಿಲ್ಪಿ ನಿರ್ಗುಣ ಪರಬ್ರಹ್ಮ ಶಕ್ತಿಯಾದ ವಿಶ್ವಕರ್ಮ ಈ ವಿಶ್ವದ ಮೂಲಶಕ್ತಿ. ಬ್ರಹ್ಮ ವಿಷ್ಣು ರುದ್ರಾದಿಗಳನ್ನು ನಿರ್ಮಿಸಿ ಅವರಿಗೆ ವಿವಿಧ ಶಕ್ತಿಗಳನ್ನು ನೀಡಿ ಪ್ರಪಂಚವನ್ನು ಮುನ್ನೆಡೆಸುತ್ತಿದ್ದಾನೆ. ಜ್ಞಾನಿಗಳು ನಿರ್ಗುಣ ಬ್ರಹ್ಮನ ಉಪಾಸಕರು ಸಾಮಾನ್ಯರು ಸುಗುಣ ಬ್ರಹ್ಮನ ಉಪಾಸಕರು.

ವಿಶ್ವಕರ್ಮನ ಮಕ್ಕಳು ಶಿವ, ವಿಷ್ಣು , ಬ್ರಹ್ಮ, ಇಂದ್ರ ಸೂರ್ಯರು ಅವರಿಂದ ಮನು, ಮಯ, ತ್ವಷ್ಟಾ ಶಿಲ್ಪಿ, ವಿಶ್ವಜ್ಞರು ಜನಿಸಿ ಕ್ರಮವಾಗಿ ಕಮ್ಮಾರ, ಬಡಗಿ, ಕಂಚುಗಾರ, ಶಿಲ್ಪಿ, ಅಕ್ಕಸಾಲಿಗಳನ್ನು ನಿರ್ಮಿಸಿ ಅವರಿಗೆ ಪಂಚ ವಿಧಗಳಾದ ಆಯ, ಶಿಲ್ಪಿ, ದಾರುಶಿಲ್ಪಿ, ತಾಮ್ರಶಿಲ್ಪ, ಸುವರ್ಣ ಶಿಲ್ಪ ವಿಧಗಳನ್ನು ನೀಡಿದನು. ಶಿಲ್ಪ ಸೃಷ್ಟಿಸುವವರಾದ್ದರಿಂದ ಅವರನ್ನು ಪಂಚ ಬ್ರಹ್ಮರೆಂದು ವರ್ಣಿಸಲಾಗಿದೆ. ಅವರಿಗೆ ವಿಶ್ವಕರ್ಮನು ಪಂಚ ವೇದಗಳನ್ನು ಕರುಣಿಸದನೆಂದೂ ಹೇಳಲಾಗಿದೆ. ಈ ಪುರಾಣಗಳನ್ನು ಈ ಪಂಚಾಳರಿಗೆ ಸಾನಗ ಸನಾತನ ಅಪಭೂತಿ ಪತ್ನ, ಸುಪರ್ಣಸ, ಎಂಬ ಗೋತ್ರ ಋಷಿಗಳ ಹಾಗೂ ಅವರಿಗೆ ಆದಿಶಕ್ತಿ ದೊರೆತ ಪರಾಶಕ್ತಿ ಮುಂತಾದ ಪಂಚಕಿ ಶಕ್ತಿಗಳ ಸಮ್ಮೇಳನವಾಯಿತು. ಅವರಿಂದ ಪಂಚಾಳರು ಈ ವೃತ್ತಿ ವಿದ್ಯೆಯನ್ನು ಪಡೆದು ಸಮಾಜದಲ್ಲಿ ಗಣ್ಯರಾಗಿರುವರು. ಅವರು ಮಾನವ ಸಂಸ್ಕೃತಿಯನ್ನು ಶಿಲ್ಪ ಚಿತ್ರಗಳ ಮೂಲಕ ನಿರ್ಮಿಸಿದವರು, ಶಾಶ್ವತಗೊಳಿಸಿದವರು ಮುಂತಾದ ವಿಪುಲ ಹೇಳಿಕೆಗಳಿವೆ. ಗ್ರಾಮ ಜೀವನದ ವಿವಿಧ

ವೃತ್ತಿಗಳಲ್ಲಿ ನಿರತರಾದ ಈ ಜನಾಂಗಕ್ಕೆ ಇಂಥ ವಿಶೇಷ ಪರಂಪರೆಯನ್ನು ಗೌರವಸ್ಥಾನವನ್ನು ನೀಡುವ ಪ್ರಯತ್ನವನ್ನು ಇಲ್ಲಿ ಕಂಡುಕೊಳ್ಳಬಹುದು. ಎಲ್ಲಾ ಸಮಾಜಗಳ ಸಾಂಸ್ಕೃತಿಕ ಇತಿಹಾಸದಲ್ಲಿ ಈ ಪುಸ್ತಕ ಕಂಡು ಬಂದಿದೆ. ಆದೇನೇ ಇದ್ದರೂ ಬಡಗ ಮುಂತಾದ ಪಂಚಾಳರು ವಿಶೇಷ ಜ್ಞಾನಿಗಳು ಕರಕುಶಲಿಗಳು ಹಾಗೂ ವೈದಿಕಾಚರಣೆ ವೇದ ವಿದ್ಯೆಗಳಲ್ಲಿ ನಂಬಿಕೆ ಉಳ್ಳವರು ಅಷ್ಟೇ ಅಲ್ಲದೇ ಅರವತ್ನಾಲ್ಕು ಕಲೆಗಳಲ್ಲಿ ಪರಿಣಿತರು. ಶತಮಾನಗಳ ಏಳು ಬೀಳುಗಳಲ್ಲಿ ಈ ಪಂಚಾಳರು ಜೀವನ ವೃತ್ತಿಗಳನ್ನು ಮುನ್ನೆಡೆಸಿ ಪರಂಪರೆಯ ಆಚರಣೆಗಳನ್ನು ಉಳಿಸಿಕೊಂಡು ಬಂದ ಆಯಗಾರರು ಎಂದು ಪ್ರಸಿದ್ಧರಾಗಿರುವರು. ಈ ಜನಾಂಗಕ್ಕಿರುವ ಪೌರಾಣಿಕತ್ವದ ಸನಾತನತೆಯ ವಿಮರ್ಶೆ ಪ್ರಕೃತ ಉದ್ದೇಶವಲ್ಲ. ಆ ಜನಾಂಗದ ತಾತ್ವಿಕ ನಿಲುಮೆಯನ್ನು ಸೂಚಿಸುವುದು ಮಾತ್ರ ಮೇಲಿನ ವಿವೇಚನೆಯಾಗಲಿ ಗೋತ್ರ ಸೂತ್ರ ವಿದ್ಯೆಗಳೇನೇ ಆಗಲೀ ಅವರು ಎಂದಿಗೂ ಬಹು ಜನ ಸಮಾಜದೊಡನೆ ಕೂಡಿ ಬಾಳಿದವರು. ಸಮಾಜದ ಅವಶ್ಯಕತೆಯನ್ನು ಪೂರೈಸಿದವರು. ಧಾರ್ಮಿಕ ಸಾಮಜಿಕ ಬದಲಾವಣೆಗಳನ್ನು ಅಳವಡಿಸಿಕೊಂಡು ಬಾಳಿದವರು. ಗ್ರಾಮೀಣ ಜನರ ವೃತ್ತಿ ಜೀವನಗಳಿಗೆ ಅನಿವಾರ್ಯನೂ ಅತಿ ಸಮೀಪನೂ ಆದ ಬಡಗಿಯು ಈ ಸಮುದಾಯ ಸೂತ್ರ. (ಜಾನಪದ, ಸಾಹಿತ್ಯದರ್ಶನ -7, ವೃಷಬೇಂದ್ರಸ್ವಾಮಿ)

**೨.೩. ಬಡಗಿ ಐತಿಹ್ಯದ ಪ್ರಕಾರ :**

ಕರಕುಶಲ ಕರ್ಮಿಗಳು ಹೇಗೆ ತಮ್ಮ ವೃತ್ತಿಗಳನ್ನು ಆಯ್ದುಕೊಂಡು ಅವುಗಳಲ್ಲಿ ಪರಿಣತರಾದರು ಎಂಬುದನ್ನು ಗಮನಿಸುವುದಾದರೆ ಆಯಾ ಜನಾಂಗಕ್ಕೆ ಸೇರಿದ ಪುರಾಣ, ಐತಿಹ್ಯ, ಹಾಡು, ಕಥೆ, ಜನಪದರಲ್ಲಿ ಕಂಡು ಬರುತ್ತದೆ. ಅದರಂತೆಯೂ ಈ ಬಡಗಿಯರ ಸಂಬಂಧಿಸಿದ ಐತಿಹ್ಯವನ್ನು ನಾನು ಸಣ್ಣವನಿದ್ದಾಗ ನಮ್ಮ ತಾಯಿ ಪದೇ ಪದೇ ಹೇಳಿದ್ದು ಈಗ ಉಪಯೋಗಕ್ಕೆ ಬಂದಿರುವುದು ಸಂತೋಷದ ವಿಚಾರ.

ಒಂದು ಜನಾಂಗದ ದೇವರ ಕೃಪೆಯಿಂದ ಅವರವರ ವೃತ್ತಿಯನ್ನು ಆಯ್ದುಕೊಂಡು ‘ ವರದ ರೂಪದ ಶಾಪವೋ ಅಥವಾ ಶಾಪ ರೂಪದ ವರವೋ ’ಎಂಬ ಇತ್ಯಾದಿ ಪ್ರಶ್ನೆಗಳ ಉದ್ಭವಿಸುವುದು ಸಾಮಾನ್ಯ.

ವಿಶ್ವಕರ್ಮ ಜಗತ್ತಿನ ಒಡೆಯ ಅವರು ಎಲ್ಲಾ ಜಾತಿ ಕುಲಮತ ಎನ್ನದೇ ಸಮನಾಗಿ ನೋಡುವ ಜಾಯಮಾನ ಅವರವರಿಗೆ ಪಂಚಾಳರಿಗೆ ತಕ್ಕಂತೆ ಆಚಾರ, ವಿಚಾರ, ನಂಬಿಕೆಗಳ ಜೊತೆಗೆ ಕರಕುಶಲ ವೃತ್ತಿಯನ್ನು ನೀಡುತ್ತಿದ್ದ ಸಂದರ್ಭ.

ಒಂದು ದಿನ ವಿಶ್ವಕರ್ಮ ಎಲ್ಲರನ್ನು ಸಭೆಗೆ ಬರಲು ಹೇಳಿದ. ಮೊದಲು ಬಂದವರಿಗೆ ಒಳ್ಳೆಯ ಕೆಲಸ ದೊರಕುತ್ತದೆ ಎಂಬ ಹೇಳಿಕೆಯನ್ನು ಕೊಟ್ಟ. ಹೀಗಿರುವಾಗ ಮೊದಲು ಅಕ್ಕಸಾಲಿಗ ಬಂದನು, ಅವನಿಗೆ ಬಂಗಾರದ ವೃತ್ತಿಯನ್ನು (ಸುವರ್ಣಕಾರ) ವರ ನೀಡಿದನು. ನಂತರ ಬಂದವನು ಎರಕ ಹೊಯ್ಯುವ ಕೆಲಸ ಕೊಟ್ಟ ಅವನಿಗೆ ಕಂಚುಗಾರ ಎಂಬ ಹೆಸರು ಪಡೆದ , ಮೂರನೆಯವನಾಗಿ ಬಂದವನಿಗೆ ಶಿಲ್ಪ ಕಲೆಯ ವೃತ್ತಿಯನ್ನು ವರ ಪ್ರಾಪ್ತವಾಯಿತು. ಅವರಿಗೆ ಶಿಲ್ಪಿ ಎಂಬ ಹೆಸರು ಪ್ರಚಲಿತಕ್ಕೆ ಬಂತು. ನಾಲ್ಕನೆಯವನು ಬಂದಾಗ ಅವನಿಗೆ ಕಬ್ಬಿಣ ಕಾಸಿ ಬಡಿಯುವ ವೃತ್ತಿಯನ್ನು ಆಶೀರ್ವಾದ ನೀಡಿದ ಅವರನ್ನೇ ಕಮ್ಮಾರ, ನೆಂದು ನಾಮಕರಣವಾಯಿತು. ಇವರೆಲ್ಲರೂ ಬಂದು ತಮಗೆ ದೊರೆತ ವೃತ್ತಿ ಮತ್ತು ಉಪಕರಣಗಳನ್ನು

ತೆಗೆದುಕೊಂಡು ಇನ್ನೊಬ್ಬ ಉಳಿದಿದ್ದ ಅವನಿಗೆ ವಿಶ್ವಕರ್ಮ ಹೇಳಿ ಕಳಿಸಿದ ಅವನು ಬರಲೇ ಇಲ್ಲ. ಆಮೇಲೆ ಬರುತ್ತೇನೆಂದು ಹೇಳಿ ಕಳಿಸಿದ. ವಿಶ್ವಕರ್ಮ ಅವನಿದ್ದಲ್ಲಿಗೆ ಹೋಗಿ ಬರುತ್ತೇನೆಂದು ಹೊರಡುವಾಗ ಇವನು ಬಂದನು. ಆಗ ವಿಶ್ವಕರ್ಮ ಅವನ ಮೇಲೆ ಕೋಪಗೊಂಡು 'ಟಕ್ ಅಂದ್ರೆ ಅಕ್ಕಿಬಾನು' ನೀನು ನಿನ್ನ ಹೊಟ್ಟೆ ತುಂಬಿಸಿಕೊಳ್ಳಲು ಈ ಬಡಗಿ ವೃತ್ತಿಯನ್ನೇ ನೀನು ಮುಂದುವರಿಸಿಕೊಂಡು ಹೋಗು ಎಂದು ಹೇಳಿದ. ಅವನು ಬಡಗಿ ಎಂಬ ಹೆಸರಿನಿಂದ ಪರಿಚಯವಾದ. ಇವನಿಗೆ ಮುಂಜಾವಿನಿಂದ ರಾತ್ರಿವರೆಗೂ ಬೆವರಿಸಿ ದುಡಿದರೆ ಮಾತ್ರ ನಿನಗೆ ಹೆಂಡ್ತಿ ಮಕ್ಕಳಿಗೆ ಗಂಜಿ. ಇಲ್ಲದಿದ್ದರೆ ಇಲ್ಲ, ಎಂದು ಶಾಪ ರೂಪದ ವರವನ್ನು ವರದ ರೂಪದ ಶಾಪವನ್ನು ನೀಡಿ ನೀನು ಬಹಳ ಬುದ್ದಿವಂತ. ನಿನ್ನ ಗ್ರಹಚಾರ, ಬಂದಿದ್ದನ್ನು ಅನುಭವಿಸು ಎಂದು ಹೇಳಿ ಹೋದನು ಎಂದು ಐತಿಹ್ಯ ಹೇಳುತ್ತದೆ.

ಹೀಗಲೂ ಕೂಡ ಈ ಬಡಗಿಯರು ಅತಂತ್ರ ಸ್ಥಿತಿಯಲ್ಲಿರುವುದನ್ನು ನಾವು ನೋಡಬಹುದು.

### ಜಾನಪದ ಹಾಡು (ಬಡಗಿಯನ್ನು ಕುರಿತು)

ಗ್ರಾಮೀಣ ಪ್ರದೇಶದಲ್ಲಿ ಸಮುದಾಯಗಳಲ್ಲಿ ನಂಬಿಕೆ ಆಚರಣೆ, ಹಾಡು, ಲಾವಣಿ, ಕಥೆ, ಇನ್ನು ಅನೇಕ ಜಾನಪದ ಪ್ರಕಾರಗಳು ಜನಪದದಲ್ಲಿ ಕಂಡುಬರುತ್ತವೆ. ಆಯಾಸಮುದಾಯಗಳಲ್ಲಿ ಅವರವೇ ಹಾಡುಗಳು ಇತ್ಯಾದಿಗಳು ಕಂಡುಬರುವುದು ಸಾಮಾನ್ಯ ಅದಕ್ಕೆ ಈಕೆಳಗಿನ ಜಾನಪದ ಹಾಡು ಆಸಮುದಾಯದ ರೀತಿ ನೀತಿಗಳ ಚಿತ್ರ ಕಾಣುತ್ತದೆ. (ಸಂಗ್ರಹ ಜಾನಪದ ಸಾಹಿತ್ಯ ದರ್ಶನ -7, ವೃ.ಸ್ವಾಮಿ).

ಬಾಗೂರ ಬಡಗಿಯ ಬರಹೇಳಿ
ಭಾರೀ(ಗುಳವಾಟ) ಉಳಿಬಾಚಿ ಸಹವಾಗಿ / ರಂಗಯ್ಯ
ಭಾರೀಯ ತೇರು ಕಡೆದಾರು ॥

ತಿಟ್ಟೂರ ಬಡಗಿಯ ಥಟ್ಟನೇ ಬರಹೇಳಿ
ಕಟ್ಟೆ ಉಳಿ ಬಾಚಿ ಸಹವಾಗಿ/ ರಂಗಯ್ಯ
ಭಾರಿಯ ತೇರು ಕಡದಾರು॥

ಬಡಿಗೇರ ಬಂದಾನವ್ವ ಬಡಿವಾರ ನೋಡಿರೆ
ಬಡಬಾಯಿ ತುಂಬ ಎಲಿ- ಅಡಿಕೆ / ಹಣೆಮ್ಯಾಲೆ
ಬಂಡಿಗಾಲೆಂಥ ಕುಂಕುಮಾ॥
(ಅಲ್ಲದೆ

ಕಂದವ್ವ ನೆತ್ತಿಕೊಂಡು ಕಂಡೆ ಬಡಿಗೇರ ಮನೆಯ
ಸದ್ಯಕ್ಕೆ ಬೇಕಣ್ಣ ಕಡಗೋಲು / ನಮ್ಮನಿಯ
ಕಾಳಮ್ಮ ಹಾಲು ಕಡೋದ್ಯೆತಿ ॥

ಬಡಿಗೇರ ಓಣ್ಯಾಗ ಸೆಡಗಿನ್ನೇನ್ಹೇಳಲಿ
ಬಿಳಿಯಂಗಿ ಬೆಳ್ಳಿ ಉಡುದಾರ / ಹಾಕ್ಕೊಂಡು
ಬಡಿಗೆಣ್ಣ ಸೆಡ್ಡೆ ಬಿಗುದಾನೋ॥

ಉಕ್ಕಿನ ಉಳಿಬಾಚಿ ಹತ್ತೆಳೆಯ ಜನಿವಾರ
ಮುತ್ತು ಸುರಿದ್ಹಾಂಗ ಬೇವತಾನ / ಮಾನಪ್ಪ
ಅಚ್ಚು ಬಡಿಗ್ಯಾರ ಮಗನವ್ವ --

ಮುಂತಾದ ಕೆಲವು ತ್ರಿಪದಿ ಗಳಲ್ಲಿ ಬಡಗಿಯ ಸೇವೆ , ಸಂಬಂದ ಹಾಗು ಆತನ ಬಗೆಗಿರುವ ಮೆಚ್ಚುಗೆ ಮೂಡಿ ಬಂದಿದೆ.

**ಐತಿಹ್ಯ :**

ಒಮ್ಮೆ ಶಿವ ಮತ್ತು ಪಾರ್ವತಿಯರ ನಡುವೆ ಚರ್ಚೆ ಆರಂಭವಾಗುತ್ತದೆ. ತಮ್ಮಿಬ್ಬರಲ್ಲಿ ಯಾರು ಅಂದವಾಗಿದ್ದಾರೆಂಬುದು ಅವರ ಸಮಸ್ಯೆ. ಅಲ್ಲಿಗೆ ದೇವಾನು ದೇವತೆಗಳನ್ನು ಸೇರಿಸಿ ತಮ್ಮಿಬ್ಬರಲ್ಲಿ ಯಾರು ಚೆನ್ನಾಗಿರುವವರು ಎಂದು ಪ್ರಶ್ನಿಸಿದರು. ಆಗದೇವತೆಗಳೆಲ್ಲಾ ಚಿಂತಿಸಿ ತಮ್ಮ ಉತ್ತರದಿಂದ ಶಿವ ಎಲ್ಲಿ ಕೋಪಗೊಳ್ಳುವನೋ ಎಂದು ಹೆದರಿ ನಿಮ್ಮ ಪ್ರಶ್ನೆಗೆ ನಾರದ ಮಹಾತ್ಮರು ಉತ್ತರಿಸಬಲ್ಲರು ಎನ್ನುತ್ತಾರೆ. ನಾರದನನ್ನು ಪ್ರಶ್ನಿಸಿದ್ದಾಗ ಆತನೂ ಉತ್ತರಿಸಿದೇ ವಿಶ್ವಕರ್ಮನನ್ನು ಪ್ರಶ್ನಿಸಿದರೆ ಉತ್ತರಿಸಬಲ್ಲ ಎಂದು ಸಲಹೆ ಕೊಡುತ್ತಾನೆ. ವಿಶ್ವಕರ್ಮನನ್ನು ಕರೆಸಿ ಪ್ರಶ್ನಿಸಿದಾಗ ಆತನೂ ಸಹ ಉತ್ತರಿಸದೇ ಚೆನ್ನಾಗಿ ಹೊಳೆಯುವ ದರ್ಪಣವನ್ನು ತಯಾರಿಸಿ ತಂದು ನಿಮ್ಮ ನಿಮ್ಮ ಮುಖವನ್ನು ನೀವೇ ನೋಡಿಕೊಳ್ಳಿ ಎಂದು ಕೊಡುತ್ತಾನೆ ಆದರೆ ಅದರ ಸಹಾಯದಿಂದ ತಮ್ಮ ಸೌಂದರ್ಯವನ್ನು ನೋಡಿ ಸಂತೋಷ ಪಟ್ಟು ಶಿವ ನಿನಗೇನು ವರ ಬೇಕು ಕೇಳು ಎನ್ನುತ್ತಾನೆ ಅದಕ್ಕೆ ವಿಶ್ವಕರ್ಮ ನನಗೆ ಸಕಲವು ಇರುವುದರಿಂದ ಯಾವವರವು ಬೇಡೆನ್ನುತ್ತಾನೆ ಕುಪಿತನಾದ ಶಿವ ಹಾಗಾದರೆ ನಿನಗೆ ದರಿದ್ರವುಂಟಾಗಲಿ ಎಂದು ಶಪಿಸುತ್ತಾನೆ ಪ್ರತಿಯಾಗಿ ವಿಶ್ವಕರ್ಮನೂ ಆತನಿಗೆ ನೀನು ದುಂಡುಕಲ್ಲಾಗು ಎಂದು ಶಾಪ ನೀಡಿದನು ಶಿವ ಗುಂಡುಕಲ್ಲಾದಾಗ ಪಾರ್ವತಿಯ ನನ್ನ ಪತಿ ನನಗೆ ಬೇಕೆಂದು ಕೇಳಿಕೊಳ್ಳುವುದರೊಂದಿಗೆ ನಿನಗೆ ಪೂರ್ಣ ದರಿದ್ರ ಉಂಟಾಗದಿರಲಿ ಎಂದು ವರ ನೀಡಿದಳಂತೆ ಅದಿನಿಂದ ಇವರ ಮನೆತನದವರು ತಾವೆಷ್ಟೆ ಸಂಪಾದಿಸಿದರೂ ಅವರ ಕೈಯಲ್ಲಿ ಏನು ಉಳಿಯದೆ ಅತಿ ಬಡವರು ಅಲ್ಲದೆ ಅತಿ ಶ್ರೀಮಂತರೂ ಅಲ್ಲದೆ ಮದ್ಯಮ ಸ್ಥಿತಿಯಲ್ಲಿ ಜೀವನ ಮಾಡುತ್ತಿದ್ದರಂತೆ ಪಾರ್ವತಿಯು ಅವರಿಗೆ ವರ ನೀಡಿದ ಪರಿಣಾಮವಾಗಿ ಈ ಜನಾಂಗದವರು ಇಂದಿಗೂ ಹಿಂದುಳಿದ ವರ್ಗಕ್ಕೆ ಸೇರಿ ಕೊಂಡು ಬಂದಿದ್ದಾರೆ ಎಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸೋಗಿಯ ತಾಯಮ್ಮನವರು ನೀಡಿದ ವಿವರ.

**೨.೪.ಶಾಸನದಲ್ಲಿ ಬಡಗಿಯ ಉಲ್ಲೇಖ :-**

ಬಡಗಿ ಸಮುದಾಯವು ಅಂದಿನ ಕಾಲದಲ್ಲಿ ರಾಜ ಮನ್ನಣೆ ಪಡೆದು ಕೊಂಡಿತ್ತು [illegible]

ಕರ್ಮಿಗಳಲ್ಲಿ ಬಡಗಿಯ ಪಾತ್ರ ಬಹು ಮುಖ್ಯವಾಗಿತ್ತು. ದೇವಸ್ಥಾನಗಳು ನಾನಾ ವಿಧವಾದ ವಿಗ್ರಹಗಳು, ಗರುಡಗಂಬಗಳು, ಸಿಂಹಾಸನ, ಮಂದಾಸನ ,ದೇವರ ಗದ್ದಿಗೆ ಹೀಗೆ ಹತ್ತು ಹಲವಾರು ಉಪಕರಣಗಳ ಜೊತೆಗೆ ಗೃಹೋಪಕರಣಗಳು, ಕೃಷಿ ಉಪಕರಣಗಳ ಯುದ್ಧೋಪಕರಣಗಳನ್ನು ವೊದಲಾದ ಉಪಕರಣಗಳನ್ನು ತಯಾರಿಸುವ ಕಾರ್ಯ ಪಂಚಾಳರಲ್ಲಿ ಒಬ್ಬರಾದ ಬಡಗಿಯರು.

★ ಕ್ರಿ ಶ ೪೪೬ರ ಗಂಗ ಅರಸ ಅವನೀತನಿಂದ ಕ್ರಿ. ೫೯೦೪ ರ ಅದೇ ಗಂಗ ಅರಸು ಇಮ್ಮಡಿ ಎರಿಯಂಗನವರಿಗೆ ಸತತವಾಗಿ ೪೩೮ ವರ್ಷಗಳ ಅವದಿಯವರೆ ರಚನೆಯಾದ ೧೨ ತಾಮ್ರ ಶಾಸನಗಳು ನಡುವೆ ಒಂದು ಶೀಲಾಶಾಸನ ವಿಶ್ವಕರ್ಮ ಮತ್ತು ವಿಶ್ವಕರ್ಮಚಾರ್ಯರ ಹೆಸರಿನಲ್ಲಿ ರಚನೆಯಾಗಿವೆ. ಆದರೆ ಇಷ್ಟು ವರ್ಷಗಳಕಾಲ ಒಬ್ಬನೇ ವ್ಯಕ್ತಿ ಜೀವಿಸಿರಲಾರ ವಿಶ್ವಕರ್ಮಚಾರ್ಯ ಎಂಬ ವ್ಯಕ್ತಿನಾಮವಲ್ಲ ಅದು ಒಂದು ಆದಿಕಾರ ಅದಿಕಾರದ ಪದನಾಮ ವಾಗಿರಬೇಕೆಂದು ಡಾ ; ಕುಮಾರಸ್ವಾಮಿಯವರ ಅಭಿಮತವಾಗಿ ಈ ಅದಿಕಾರವನ್ನು ಸಹಾಜವಾಗಿಯೇ ಅಕ್ಕಸಾಲಿಕೆ ಬಡಗಿತನ ಕಂಚುಗಾರಿಕೆಯನ್ನು ಮಾಡುವ ವಿಶ್ವಕರ್ಮ ಮತೀಯರಿಂದ ನೇಮಕ ಮಾಡಲಾಗುತ್ತಿತ್ತು ಅಥಾವ ವಿಶ್ವಕರ್ಮ ಮತೀಯರ ಒಂದು ಮನೆತನವು ಆನುವಂಶಿಕವಾಗಿ ಈ ಒಂದು ಜವಬ್ದಾರಿಯನ್ನು ನೀರ್ವಯಿಸಿಕೊಂಡು ಬರುತ್ತಿತ್ತು ಏಕೆಂದರೆ ವಿಜಯನಗರದ ಅರಸರ ಅದಿಪತ್ಯೆದಲ್ಲಿ ಹೀಗೆಯೇ ಬಡಗಿ ಎಂಬ ಅರ್ಥದ ತ್ವಷ್ಟ ಎಂಬ ಪದನಾಮದ ವೀರಣಾಚಾರ್ಯ ಎಂಬುವನ ಮನೆತನವು ಅನುವಂಶಿಕವಾಗಿ ಈ ಕಾರ್ಯವನ್ನು ನಿರ್ವಹಿಸುತ್ತಿತ್ತು

ಗತ ಕಾಲದ ಬಡಗಿಗಳನ್ನು ಅರೆ ಕುಶಲ ಬಡಗಿ ಮತ್ತು ಕುಶಲ ಬಡಗಿಗಳು ಎಂದು S. ಗುರುರಾಜಾಚಾರ್ ಅವರು ಎರಡು ಭಾಗಮಾಡುತ್ತಾರೆ. ದಿನ ನಿತ್ಯದ ಸಾಮಾನ್ಯ ಜನರ ಉಪಯೋಗಿಸುವ ಪಿರೋಪಕರಣಗಳು ನೇಗಿಲು ಎತ್ತಿನಗಾಡಿ ಮೊದಲಾದ ವ್ಯವಸಾಯೋಪಯೋಗಿ ವಸ್ತುಗಳು ಸಾಮಾನ್ಯ ಮನೆ ಮಟ್ಟಗಳನ್ನು ಮಾಡುವವರನ್ನು ಮೊದಲನೆಯ ಗುಂಪಿಗೂ ಅರಸುಗಳ ಹಾಗೂ ಆಧಿಕಾರ ವರ್ಗದವರ ಅಬಿರುಚಿಗನುಗುಣವಾಗಿ ಸೂಕ್ಷ್ಮವಾದ ಕೆತ್ತನೆ ಕೆಲಸದ ಪರಿಕರಗಳನ್ನು ವಿಶೇಷವಾದ ಮರದ ದೇವಸ್ಥಾನಗಳನ್ನು ಹಾಗೂ ರಥಗಳನ್ನು ಮಾಡುವವರನ್ನು ಎರಡನೇ ಗುಂಪಿಗೆ ಸೇರಿಸಬಹುದು ವ್ಯವಸಾಯದ ಉಪಕರಣಗಳನ್ನು ತಯಾರಿಸುವ ಬಡಗಿಗಳಿಗೆ ಗ್ರಾಮಸ್ಥರು ವರ್ಷಕ್ಕೆ ಇಂತಿಷ್ಟು ಎಂದು ಗೊತ್ತುಪಡಿಸಿ ಕೊಡುತ್ತಿದ್ದರು. ದಂಡಾಧಿ ಪತಿಯೊಬ್ಬನ್ನು ಕ್ರಿ. ಶ ೧೧೫೫ ರಲ್ಲಿ ವಿರುಪಾಕ್ಷಪುರ ಎಂಬ ನಗರವನ್ನು ಕಟ್ಟಿ ಅದನ್ನು ಬ್ರಾಹ್ಮಣರಿಗೆ ಮರದ ಮಂಚಗಳನ್ನು ಬಡಗಿಗಳಿಂದ ಮಾಡಿಸಿ ಧಾನವಾಗಿ ಕೊಡುತ್ತಾನೆ.

ಕ್ರಿ. ಶ ೧೨೨೫ ರ ಒಂದು ಶಾಸನವು ಬಡಗಿ 'ಚಂಪೋಜ' ಎನ್ನುವವನಿಗೆ ಅವನ ಸೇವೆಯನ್ನು ಪರಿಗಣಿಸಿ ಭೂಮಿಯನ್ನು ದಾನ ಮಾಡಿದವಿವರ ಪ್ರಸ್ತಾಪ ವಿದೆ( ಎಫಗ್ರಪಿಯಾ ಕರ್ನಾಟಕ ಚಿಕ್ಕಬಳ್ಳಪುರ ೨.೧) ಶಿರ ತಾಲೂಕಿನ 'ಶಾಸನವು ಸುಧಾರಣ ಸಂಶ್ರಾವಣಶು ಗುರುವಾರ ತಾಳಗುಂದದ ಬಡಗಿ ಚಿನ್ನದ ಶಿರಿಶ.... ದಿ ಬಾಗಿಲು' ಎಂಬುವುದಾಗಿ ಹೇಳುತ್ತದೆ ಈ ಶಾಸಾನವು ದೊಡ್ಡ ಚಿಕ್ಕನಹಳ್ಳಿ ಎಂಬ ಗ್ರಾಮದ ಊರಿನ ಹೊರಬಾಗಿಲಿನ ಮೇಲೆ ಇರೊದರಿಂದ ಆ ಒಂದು ದಿಡ್ಡಿಯ ಬಾಗಿಲನ್ನು ಚಿನ್ನದಗಿರಿ ಎಂಬ ಬಡಗಿ ಮಾಡಿದನೆಂದು ನೆಂದು ತಿಳಿದು ಬರುತ್ತದೆ ಮತ್ತೊಂದು ಶಾಸನದ ಪ್ರಕಾರ ನಾಗಮಂಗಲ ತಾಲೂಕಿನ ದೇವರ ಹಳ್ಳಿಯಲ್ಲಿರುವ ತವಸಿ ರಾಮ ಗುಡಿಯ ಮಹಾದ್ವಾರದ ಮರದ ಬಾಗಿಲನ್ನು ಅದೇ ಗ್ರಾಮಕ್ಕೆ ಸೇರಿದ ಚಿಕ್ಕಾಚಾರಿಯು ಸೇವಾರ್ಥ ಎಂದು ಮಾಡಿಕ್ಕಟ್ಟದ್ದಾನೆ ( ಉ. ಕ. ೫೧೧ ( ನಾಗಮಂಗಲ ೧೧೬)

ಬಡಗಿಗಳು ಕುಶಲತೆಗೆ ಹೆಸರಾದವರು ಅವರು ಸಾಂಸ್ಕೃತಿ ಉಪಕರಣಗಳನ್ನು ತಯಾರುಸುವಲ್ಲಿ ಸಿದ್ಧಹಸ್ತರು. ಕ್ರಿ.ಶ.೧೮೫೯ ರ ಇತ್ತೀಚಿಗೆ ಪಾಂಡವಪುರ ಕನ್ನಂಬಾಡಿ ಗ್ರಾಮದಲ್ಲಿರುವ ಮಹಾಲಕ್ಷ್ಮಿ ಗುಡಿಗೆ ಸೇರಿದ ರಥವನ್ನು "ದರ್ಮಲಿಂಗಾಚಾರಿ" ರಚನೆ ಮಾಡಿದ್ದಾನೆ ಶಾಸನವು", ದರ್ಮಲಿಂಗಾಚಾರಿ ನಿರ್ಮಿತ " ಎಂದು ಮಾತ್ರ ಹೇಳದೇ ಬೊಗೆಗೌಡನ ಹೆಂಡತಿ ಮಹಾಲಕ್ಷ್ಮಿ ಶ್ರೀ ಮಹಾಕಾಳಿ ಅಮ್ಮನವರ ಸೇವಾರ್ಥ ಎಂಬುವುದಾಗಿ ಮಾಡಿಸಿದ್ದಾರೆ.(೧೪೬)( ಎ.ಕ. vi ಪು೧೨೩ ಸಂ ೨೪)

ಕುಶಲಿಗಳೂ ವಾಸ್ತು ವಿಜ್ಞಾನ ತಜ್ಞರೂ ಅದ ಬಡಗಿಗಳು ಅರಸರ ಅರಮನೆಗಳನ್ನು ಅದಿಕಾರಿಗಳ ಸೌಧಗಳನ್ನು ಮರದ ದೇವಸ್ಥಾನಗಳನ್ನು ಕಟ್ಟುತಿದ್ದರು. ನಮ್ಮ ಗತಕಾಲದ ಬಡಗಿಗಳ ಕೃತಿಗಳು ಮರದ ರಚನೆ ಯಾಗಿದ್ದರಿಂದ ಅವು ಇಂದು ನಾಶವಾಗಿವೆ ಇಂತಹ ಪ್ರಾಚೀನ ಮರದ ರಚನೆ ಬಗ್ಗೆ ಯಾಗಲಿ ಬಡಗಿಗಳ ವ್ಯಕ್ತಿ ವಿಚಾರಗಳಬಗ್ಗೆ ಯಾಗಲಿ ಶಿಲಾಶಾಸನಗಳನ್ನು ಹೆಚ್ಚಿನ ಮಾಹಿತಿ ಕೊಡುವುದಿಲ್ಲ. ಹೀಗೆ ಕೃತಿ ಮತ್ತು ಕರ್ತೃವಿನ ಉಲ್ಲೇಖ ಎರಡು ಇಂದು ಅನುಲಬ್ದವಾಗಿರುವುದರಿಂದ ಪ್ರಾಚಿನ ಬಡಗಿಗಳ ಜೀವನವನ್ನ ಪುನರ್ ರಚನೆ ಮಾಡುವುದು ತುಂಬಾ ಕಷ್ಟವಾಗಿದೆ.

ಕ್ರಿ.ಶ.೧೪೩೧ರ ಮಾಲೂರು ತಾಲೂಕ ತೇಕಲು ಗ್ರಾಮದ ವರದರಾಜ ಸ್ವಾಮಿ ದೇವಸ್ಥಾನದಲ್ಲಿ ಅದೇಗ್ರಾಮದ ವಾಸಿಯಾಗಿದ್ದ "ದೇವೋಜ" ಎಂಬ ಬಡಗಿಯ ಗುಡಿಗೆ ಸಂಬಂದಿಸಿದ ಮರಗೆಲಸವನ್ನು ಮಾಡಿಕೊಡುತ್ತಾನೆ ಇವನ ತಂದೆ "ಬೇವೋಜ" ಈ ಕೆಲಸಕ್ಕಾಗಿ ಈತನಿಗೆ ಗದ್ದೆಯನ್ನು ಹೊಲವನ್ನು ಕೊಡಲಾಗಿದೆ ಎಂದು, ಎಪಿಗ್ರಪಿಯ ಕರ್ನಾಟಕ xvii ಮಾಲೂರು ೩ರಲ್ಲಿ ತಿಳಿದು ಬರುತ್ತದೆ.

ಕ್ರಿ. ಶ. ೧೪೮೦ ಅಥವಾ ೧೫೧೫ ರ ಬಡಗಿ ಲಿಂಗೋಜ ನ ಜಗಲೂರು ತಾಲೂಕ ನಿಬಗುರಿನಲ್ಲಿ ಆಂಜನೇಯ ಗುಡಿಯನ್ನು ಕಟ್ಟಿದ್ದಾನೆ ಇದಕ್ಕಾಗಿ ಗೌಡನು ಇವನಿಗೆ ಅರವತ್ತು ವಕ್ಕಲು ಮಾನ್ಯವನ್ನು ಕೊಡುತ್ತಾನೆ ಇದು ಮರದ ದೇವಸ್ಥಾನ ವಿರಬೇಕು ಎಂದು ಡಾ.. ಕುಮಾರಸ್ವಾಮಿ ಅಭಿಯುಪಡುತ್ತಾರೆ.

ಗೌರಯ್ಯ ಎನ್ನುವವನು ದೇವಸ್ಥಾನವನ್ನು ಕಟ್ಟಿದ ಮತ್ತೊಬ್ಬ ಬಡಿಗಿ. ಇವನ ಕಾಲ೧೫೧೧, ಇವನ ಊರು ಸೊಂಡೇಕೆರೆ ಇವನ ತಂದೆ ಪರವೋಜ ಎಂದು ಚಿತ್ರದುರ್ಗ ತಾಲೂಕು ಜಂಪಾಳನಾಯ್ಕನ ಕೋಟೆಯ ಹತ್ತಿರ ಹನುಮಂತ ದೇವರ ಗುಡಿ ಇವನ ಕೃತಿ (ಎ.ಕ.ಚಿತ್ರದುರ್ಗ -೪೧)

ಕ್ರಿ.ಶ. ೧೫೫೩ ಶಿವಡಿಯೋಜ ಎಂಬ ಬಡಗಿಯದು ಅಪರೂಪದ ಉಲ್ಲೇಖ. ಏಕೆಂದರೆ ಇವನು ಮಾಳಿಗೆಯ ಮನೆಯನ್ನು ರಚನೆ ಮಾಡುತ್ತಿದ್ದ ಶಾಸನವು ಇದನ್ನು ಅರಮನೆಗೆ ಎಂದು ಹೇಳಲಾರದಿದ್ದರೂ ಇದನ್ನು ಕಟ್ಟಿಸಿದವನು ಕಳನಿಯಾರ ಪ್ರಭು ಎಂದು ಕರೆದುಕೊಂಡಿರುವುದರಿಂದ ರಾಜಾಧಿಕಾರಿಯಾದ ಇವನು ಕಟ್ಟಿಸಿದ್ದು ದೊಡ್ಡ ಸೌಧವೋ ಅರಮನೆಯೋ ಆಗಿದ್ದಿರಬೇಕು. ಈತನು ಅನೇಕ ಜನ ಬಡಗಿಗಳ ಮೇಲೆ ಮೇಲುಸ್ತುವಾರಿಯನ್ನು ಮಾಡಿದ. ಪ್ರಧಾನ ಬಡಗಿಯಾಗಿದ್ದಿರಬೇಕೆಂದು ಡಾ॥ಕುಮಾರ್ ಸ್ವಾಮಿಯವರ ಅಭಿಪ್ರಾಯ.

ಡಾ॥ ಎಸ್.ಗುರುರಾಜಾಚಾರ್ ಪೂರ್ವೋತ್ತರದಲ್ಲಿ ಕರ್ನಾಟಕವು (ಬಾದಾಮಿ ಚಾಲುಕ್ಯರನ್ನು) ಹಿಂದಿನ ಕಾಲದಿಂದಲೂ ಸಮುದ್ರಯಾನದಲ್ಲಿ ತೊಡಗಿತ್ತೆಂದೂ ಎರಡನೇಯ ಪುಲಕೇಶಿಯು ಒಂದು ನೂರು ಹಡಗುಗಳನ್ನು ಪೂರಿಯ ಮೇಲೆ ತಾನು ಮಾಡಿದ ಯುದ್ಧದಲ್ಲಿ ಉಪಯೋಗಿಸಿದನೆಂದೂ ಯಾದವ ಮಹಾರಾಜನೊಬ್ಬನು ಕೂಡ ತನ್ನದೇ ಆದ ನೌಕಾಪಡೆಯನ್ನು ಹೊಂದಿದ್ದನು ಎಂದು ಹೇಳುತ್ತಾ. ಆ ಕಾರಣದಿಂದ ಕರ್ನಾಟಕದಲ್ಲಿ ಹಡಗು ಕಟ್ಟುವ ಕೈಗಾರಿಕೆಯು ಕನ್ನಡಿಗರಿಗೆ ಚೆನ್ನಾಗಿಯೇ ತಿಳಿದಿತ್ತೆಂದು ಹೇಳುತ್ತಾರೆ. ಮುಂದುವರಿದು ಹಡಗು ಕಟ್ಟುವಲ್ಲಿ ಮರವನ್ನು ಉಪಯೋಗಿಸುತ್ತಿದ್ದುದಾಗಿ ಉಲ್ಲೇಖಿಸುತ್ತಾರೆ. ಅಂತೆಯೇ ನಾವು ಇಲ್ಲಿ ಕೂಡ ನಿಷ್ಣಾತರಾದ ಬಡಗಿಗಳು ದುಡಿದಿರಬೇಕೆಂದು ಉಹಿಸಬಹುದು. ಆದರೆ ಹಡಗು ಕಟ್ಟಿದ ಯಾವ ಬಡಗಿಯೂ ಶಾಸನದಲ್ಲಿ ಉಪಲಬ್ಧವಾಗಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಬೊಬ್ಬರ್ಯ ಎಂಬ ಪಾಡ್ದನದಲ್ಲಿ ಹಡಗನ್ನು ಕಟ್ಟಲು ಮರವನ್ನು ಕಡಿದು ಕೆಲಸ ಮಾಡಲು ಮಲೆನಾಡಿನ ಕಡೆಯಿಂದ ಬಡಗಿ ಆಚಾರಿಗಳನ್ನು ಕರೆಯಿಸಿದರು ಎಂಬ ವಿಷಯವಿದೆ. ಆದ್ದರಿಂದ ಕನ್ನಡದ ಬಡಗಿಗಳು ಹಡಗುಗಳನ್ನು ಕಟ್ಟುವಲ್ಲಿ ದುಡಿಯುತ್ತಿದ್ದರು ಎಂಬ ಅಂಶವುತಿಳಿದು ಬರುತ್ತದೆ. (ಪ್ರಾಚೀನ ಕಾಲದಲ್ಲಿ ಶಿಲ್ಪಚಾರಿಯರು - ಡಾ॥ಕೆ.ಎಸ್.ಕುಮಾರಸ್ವಾಮಿ.)

ಹೀಗೆ ಇವುಗಳನ್ನು ವಿವರವಾಗಿ ನೋಡಿದರೆ ಅಂದಿನ ಕಾಲದಲ್ಲಿ ಬಡಗಿಗಳ ಮಹತ್ವ ಅವರು ನಿರ್ವಹಿಸುತ್ತಿದ್ದ ಕಾರ್ಯವನ್ನು ಶಾಸನ ಮೂಲಕ ತಿಳಿಯಬಹುದಾಗಿದೆ. ಪಂಚಾಳರ ಗುರು ವಿಶ್ವಕರ್ಮ, ವಿಶ್ವಕರ್ಮನ ಜಗತ್ತಿನ ಸೃಷ್ಟಿಕರ್ತ ಎಂದು ಈ ಸಮುದಾಯದಲ್ಲಿ ನಂಬಿಕೆ ಇದೆ,. ಇವರೂ ಕೂಡ ರಾಜಮನ್ನಣೆ ಪಡೆದಿದ್ದರು ಎಂಬ ಅಂಶ ತಿಳಿಯಬಹುದಾಗಿದೆ.

**೨.೫. ಸಾಹಿತ್ಯದಲ್ಲಿ ಬಡಗಿಯ ಉಲ್ಲೇಖ :**

ಬಡಗಿಗಳು ನಿರ್ವಹಿಸುತ್ತಿದ್ದ ಕೆಲಸವನ್ನು ನಾವು ದಾಖಲೆಗಳ ಮೂಲಕ ಶಾಸನ, ವಾಸ್ತುಶಿಲ್ಪ, ಕುರುಹು, ಜೊತೆಗೆ ಮುಖ್ಯವಾಗಿ ಸಾಹಿತ್ಯದಲ್ಲಿ ಕೂಡ ನಾವು ಉಲ್ಲೇಖಿಸಿರುವುದನ್ನು ನಾವು ಕಾಣಬಹುದಾಗಿದೆ., ವ್ಯವಸಾಯ, ಗೃಹೋಪಕರಣ, ಸಾಂಸ್ಕೃತಿಕ, ಉಪಕರಣವನ್ನು ಜೊತೆಗೆ ದೇಶೀಯ ತಂತ್ರಜ್ಞಾನದಂತಹ ಯುದ್ಧೋಪಕರಣಗಳನ್ನು ತಯಾರಿಸುತ್ತಿದ್ದರು ಎಂಬುದನ್ನು ನಮಗೆ ಸಾಹಿತ್ಯ ಮತ್ತು ಶಾಸನಗಳ ಮೂಲಕ ಕಂಡು ಬರುತ್ತದೆ.

'ಕುಮಾರ ರಾಮನ ಚರಿತೆ' ಯಲ್ಲಿ ಆಯುಧಗಳನ್ನೇ ಬಡಗಿಗಳು ತಯಾರಿಸುತ್ತಿದ್ದರು ಎಂಬುದು ತಿಳಿದು ಬರುತ್ತದೆ. ಬಲಿವಪಟಲಬೆಣೆ, ಡೆಂಕಣಿಗೈ, ಪಂದಿದತೆ, ತಿರುಗಣೆ, ಭೀಮಗದೆ, ಮೊದಲಾದ ಮರದ ಆಯುಧಗಳನ್ನು ಬಡಗಿಗಳು ಕೆತ್ತಿದ್ದರು ಎಂದು ತಿಳಿಸುತ್ತದೆ. 'ಕೆತ್ತುವಾ ಬಡಗಿಗಳಿಂದಾ ದುರ್ಗ ಸಲೆ ಮೆರೆದುದು' ಎಂಬ ಉಕ್ತಿಯು ಬಹುಮಟ್ಟಿಗೆ ಯುದ್ಧದ ಆಯುಧಗಳನ್ನು ಶತ್ರುಗಳಿಂದ ರಕ್ಷಿತವಾದ ರಹಸ್ಯವಾದ ದುರ್ಗದ ಒಳಗೆ ಇದ್ದುಕೊಂಡು ನಿರ್ಮಾಣ ಮಾಡುತ್ತಿದ್ದರು ಎಂಬ ಅಂಶವನ್ನು ಹೇಳುತ್ತದೆ.

ಸನಾತನ ವಿಶ್ವಬ್ರಾಹ್ಮಣ ಧರ್ಮದ ಮೂಲ ಅಧಿದೇವ ವಿಶ್ವಕರ್ಮ. ವಿಶ್ವದ ಸೃಜನೆ ರಕ್ಷಣೆ ಆಗು-ಹೋಗುಗಳು ಯಾವನಿಂದ ಆಗುವವೋ ಅವನು ವಿಶ್ವಕರ್ಮನೆಂದು ಪಾಣಿನಿಯು ಅಷ್ಟಾಧ್ಯಾಯಿ

ವರ್ಣಿಸಿದ್ದಾರೆ. ವಿಶ್ವಕರ್ಮರಲ್ಲಿ ಬಡಗಿಯು ಪ್ರಮುಖವಾಗಿರುತ್ತಾನೆ ಎಂಬುದನ್ನು ನಾವು ತಿಳಿಯಬಹುದಾಗಿದೆ.

ಯಾವನು ವೇದಗಳಿಂದಲೇ ಅಳೆಯಲು ಸಾಧ್ಯವೋ, ವಾಕ್‌ಕ್ರಿಯೆಗಳಿಗೆ ಒಡೆಯನೋ, ಶಾಶ್ವತನೋ ಆ ವಿಶ್ವಕರ್ಮನಿಗೆ ನಮಸ್ಕರಿಸುತ್ತೇನೆ ಎಂದು ಮನುಸ್ಮೃತಿಯಲ್ಲಿ ಮನು ಸ್ತುತಿಸಿದ್ದಾನೆ.

ವಿಶ್ವಕರ್ಮ ಪರಮಾತ್ಮನ ಪಂಚಮುಖಗಳಿಂದ ಪಂಚ ಬ್ರಹ್ಮರು ಜನಿಸಿದರು. ಅವರುಗಳು ಮನು, ಮಯ, ತ್ವಷ್ಟ, ಇಂದ್ರ, ವಿಶ್ವಜ್ಞ ಎಂಬ ಪಂಚ ಬ್ರಹ್ಮರು ಜನಿಸಿದರೆಂದು ಉಪನಿಷತ್‌ಗಳಲ್ಲಿ ಪುರಾಣಗಳಲ್ಲಿ ಉಲ್ಲೇಖವಾಗಿವೆ. (ಜಾ.ಸ.ದ.7 ಡಾ॥ವೃ.ಸ್ವಾಮಿ)

೧೭ನೇಯ ಶತಮಾನದ ಕರಸ್ಥಲದ ನಾಗಲಿಂಗ ಚರಿತೆ ಎಂಬ ಕಾವ್ಯದಲ್ಲಿ ಈ ಕುಶಲ ಕೆಲಸಗಾರರು ಮನು, ಮಯ, ತ್ವಷ್ಟಾ, ಶಿಲ್ಪಿ, ಮತ್ತು ವಿಶ್ವಜ್ಞ ಎಂಬ ಐದು ಗೋತ್ರಗಳನ್ನೇ ಉಳ್ಳವರಾಗಿದ್ದರು ಎಂದು ಹೇಳಲಾಗಿದೆ. (ಗ್ರಾಮೀಣ ವೃತ್ತಿಗಳು ಕ.ಪು.ಪ್ರಾ. ಗ್ರಾಮ ಸಂಸ್ಕೃತಿ ಮಾಲೆ-1)

ಶಿಲ್ಪಶಾಸ್ತ್ರ ಗ್ರಂಥದಲ್ಲಿ ಈ ರೀತಿಯಾಗಿ ತಿಳಿಸುತ್ತದೆ. ಸರ್ವಕಲಾಧಾನ ಭೂತ ಚಿತ್ರಕಲಾಭಿಜ್ಞೇನ ವಿಶ್ವಕರ್ಮಾಚಾರ್ಯ ಎಂಬ ಶಿಲಶಾಸ್ತ್ರ ಎಂಬ ಗ್ರಂಥದಲ್ಲಿ ಇದೆ. ಮುಂದುವರೆದು,

ಜಂಬೂದಾಪಾಂತರೇ ಕಶ್ವಿತ್ ವಾಸ್ತು ಪ್ರಾಸಾದತತ್ವಗತ
ನರಸೊಬ್ಬ ಸಮೋ ವಿದ್ವಾನ್ ನ ಭೂತೋ ನ ಭವಿಷ್ಯತಿ

'ಮರವೆಸನಿಟ್ಟಿಗೆ ಕಲಾಕಣರಣೆಯ ಲೊಪ್ಪದೊಳ್ ಚಿತ್ರದೊಳ್ ಪ್ರಾಸಾದ್ಯೋತ್ಯರ ವಿದ್ಯಾಸಳನಿದಂ ಕಂಡರಸಿದಂ ಮರವೆಸದೊಳ್ ಕಲ್ದೆಸದೊಳ್ ವರ ಪತ್ರ ಭೇದಮ್ಮಂಗಳೊಳುಂ, ದೊರೆ ವಿಶ್ವಕರ್ಮನುಳಿದು ಶ್ರೀ ಸುತ್ರಧಾರಿ ಬಮ್ಮ"(ಸೌತ ಇಂಡಿಯನ್ ಇನ್ ಸ್ಕ್ರಿಪ್ಷನ್)

'ಹಸ್ತಶಾಲತೆಯೊಳು ಹೇಮಕರ್ಮ ಲೋಹಕರ್ಮ, ಶಿಲಾಕರ್ಮ, ರತ್ನಕರ್ಮ, ಕಾಷ್ಠಕರ್ಮ, ಚಿತ್ರಕರ್ಮ, ಪತ್ರ ಕರ್ಮ, ಪ್ರತಿಮಾ ಲಕ್ಷಣ ಸಮಸ್ತ ಹಸ್ತ ಕುಶಲತೆಯೊಳು' ಎಂದು ಎಪಿಗ್ರಾಪಿಯೂ ಇಂಡಿಯಾ ಕೊಪ್ಪ ೬೮, ಕ್ರಿ.ಶ.೧೧೧೬, ಶಾಸನದಲ್ಲಿ ಉಕ್ತವಾದ ಶಾಸನ ರಚನಾ ಕಾರ್ಯರು 'ಶಿಲ್ಪಶಾಸ್ತ್ರ'ಎಂಬಗ್ರಂಥ ನೋಡಿಕೊಂಡು ಕೊರೆದಿರಬಹುದೆಂದುಡಾ॥ಕುಮಾರಸ್ವಾಮಿಯವರು ವಿವರಿಸುತ್ತಾರೆ.

ಇವೆಲ್ಲವುಗಳನ್ನು ನೋಡಿದರೆ ಎಲ್ಲಾ ಕರಕುಶಲರ ವೃತ್ತಿಗಳು ಈ ಸಾಲುಗಳು ಪ್ರತಿಬಿಂಬಿಸುತ್ತವೆ. ಅಂದರೆ ಅಂದಿನ ಕಾಲದಲ್ಲಿ ಬಡಗಿ ವೃತ್ತಿಯ ಹೆಚ್ಚು ಪ್ರಚಲಿತ ಇತ್ತು. ಸಾಮಾಜಿಕವಾಗಿ ಇವರು ತಮ್ಮದೇ ಆದ ಸ್ಥಾನವನ್ನು ಹೊಂದಿದ್ದರು ಎಂಬುದನ್ನು ಈ ಸಾಹಿತ್ಯ ಕೃತಿಗಳು ವಿವರಿಸುತ್ತೆ. ಪಾಂಚಳರು ಕೇವಲ ವೃತ್ತಿಗಳನ್ನು ಹಂಚಿಕೊಂಡಿದ್ದರೂ ಅವರೆಲ್ಲರೂ ಒಂದೊಂದು ವೃತ್ತಿ ಧರ್ಮದಲ್ಲಿ ತಾರತಮ್ಯ ವಿರಲಿಲ್ಲ.

ಒಂದಕ್ಕೊಂದು ಪೂರಕವಾಗಿ ವೃತ್ತಿಗಳನ್ನೇ ತಮ್ಮ ಕೌಶಲ್ಯದಿಂದ ತಂತ್ರಜ್ಞಾನದಿಂದ ಬಡಗಿ, ಕಮ್ಮಾರಿಕೆ, ಚಿತ್ರಕಲೆ, ಸುವರ್ಣಕಾರಿಕೆ ಹೀಗೆ ಎಲ್ಲಾ ಕೆಲಸವನ್ನು ಮಾಡುತ್ತಿದ್ದ ಉಲ್ಲೇಖಗಳು ನಮಗೆ ಸಿಗುತ್ತವೆ.

ಒಂದು ಕುಟುಂಬದಲ್ಲಿ ತಾತ ಒಂದು ವೃತ್ತಿ, ಕಮ್ಮಾರಿಕೆ ಮಾಡಿದರೆ ಅವರ ಮಗ (ಅಕ್ಕಸಾಲಿ) ಮತ್ತೊಂದು ವೃತ್ತಿಯನ್ನು ಇವರ ಮಗ (ಬಡಗಿ) ಬೇರೊಂದು ವೃತ್ತಿಯನ್ನು ಮಾಡುವ ಉದಾಹರಣೆಗಳು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗದಗ ಜಿಲ್ಲೆಯ ಮಾಗಡಿಯ ವಿರೂಪಾಕ್ಷಪ್ಪನವರ ಕುಟುಂಬದಲ್ಲಿ ಕಂಡು ಬಂದಿದೆ. ಅಂದರೆ ಪಾಂಚಾಳ ವೃತ್ತಿಗಳು ಎಂದು ತಿಳಿಯಬೇಕು.

ವೇದಗಳು ಜಾತಿಯಲ್ಲ , ಧರ್ಮ ಅಲ್ಲ,ವಿಶ್ವಕರ್ಮ ವೇದಗಳನ್ನು ಕೊಟ್ಟಿದ್ದಾರೆ.ವ್ಯಾಸ, ಕಾಳಿದಾಸ,ವಾಲ್ಮಿಕಿ ಮಹಾಕವಿಗಳು ಕೊಟ್ಟಂತೆಯೇ ವಿಶ್ವಕರ್ಮ ಈ ದೇಶಕ್ಕೆ ವೇದಗಳನ್ನು ಕೊಟ್ಟಿದ್ದಾನೆ .ವೇದ ಕಾಲನ ಜ್ಞಾನ ಪರಂಪರೆಯನ್ನು ವಿಸ್ತರಿಸಿ ಕಾಲನಂತರದಲ್ಲಿ ಆರ್ಯರ ಆಕ್ರಮಣಕ್ಕೆ ಒಳಪಟ್ಟು ತಮ್ಮ ಅಮೂಲ್ಯ ವೇದಜ್ಞಾನವನ್ನು ಕಳೆದುಕೊಂಡು ಚರಿತ್ರೆಯ ಮೇರೆಗೆ ಸರಿಯಬೇಕಾದ ಇಕ್ಕಟ್ಟಿಗೆ ಪಂಚಾಳ ಸಮಾಜದವರು ಒಳಪಟ್ಟಿರುವುದನ್ನು ಈ ಕಾಲದಲ್ಲಿ ಬಹಳ ಸಲೀಸಾಗಿ ಮರೆತು ಬಿಡುತ್ತಿದ್ದೇವೆ. ಮರೆತು ಹೋದ ಮಹಾ ಸಾಮ್ರಾಜ್ಯದ ಬಗ್ಗೆ ನಮಗೆ ತುಂಬಾ ಮಮಕಾರವಿದೆ. ವಿಜಯನಗರ ಸಾಮ್ರಾಜ್ಯ ಗತಿಸಿದ ವೈಭವದಂತೆಯೇ ಪಂಚಾಳ ಸಮುದಾಯಗಳು ಸಾಂಸ್ಕೃತಿಕ ಜ್ಞಾನ ಸಂಪತ್ತು ಕೂಡ ಆರ್ಯರ ಧಾರ್ಮಿಕ ದಾಳಿಯಿಂದ ಭಗ್ನವಾಗಿದೆ. ಆದರೆ ಇಂತಹ ಜ್ಞಾನ ಪರಂಪರೆಯ ಸಮುದಾಯಗಳೇ ಗಾಯಗೊಂಡು ದೇಶದುದ್ದಕ್ಕೂ ಇವತ್ತು ಜಗತ್ತಿನ ಹೊಸ ತಂತ್ರಜ್ಞಾನದ ಮಾಹೆಯಲ್ಲಿ ಕಳೆದು ಹೋಗುತ್ತಿದ್ದರುವುದು ಕೂಡ ಯಾರು ಗಮನಕ್ಕೆ ಒಳಪಡದಂತೆ ಕಾಣುತ್ತಿರುವುದು ಹಿಡಿಯಾಗಿ ಈ ದೇಶದ ಕರಕುಶಲ ದೇಶೀಯ ತಂತ್ರಜ್ಞಾನವನ್ನು ವಿಸ್ಮೃತಿಯ ಪಾತಾಳಕ್ಕೆ ತಳ್ಳುವಂತೆ ಮಾಡುತ್ತದೆ.

**ರಾಮಾಯಣದಲ್ಲಿ ವಿಶ್ವಕರ್ಮರು (ಬಡಗಿ) :**

ವಾಲ್ಮೀಕಿ ರಾಮಾಯಣದ ವಿಮರ್ಶೆಯನ್ನು ಜಿವಣ್ಣ ಮಸಳಿರವರು 'ರಾಮಾಯಣದಲ್ಲಿ ವೃಶ್ವಕರ್ಮಣರು ಎಂಬ ತಲೆ' ಬರಹದ ಕೆಳಗೆ ಮೂರು ಭಾಗ ಮಾಡಿದ್ದಾರೆ.

ಜೀವಣ್ಣ ಮಸಳಿಯವರು ರಾಮಾಯಣದಲ್ಲಿ ವಿಶ್ವಕರ್ಮರ ಕುರುವುವನ್ನು ನೀಡುತ್ತಾ ವಿಮರ್ಶಿಸುತ್ತಿದ್ದಾರೆ. ಇಲ್ಲಿ ಆಧಾರವಾಗಿಟ್ಟುಕೊಂಡು ಇಲ್ಲಿ ನಾನು ವಿವರಿಸಿದ್ದೇನೆ.

ಸಾಮಾನ್ಯವಾಗಿ ತಾವು ಜನಿಸಿದ ಮತಧರ್ಮದ ಆಧಾರದ ಮೇಲೆ ಇತ್ತೀಚಿನ ಸಾಹಿತಿಗಳು ತಮ್ಮ ಮತಕ್ಕೆ ಹೊಂದಿಸಿಕೊಂಡು ವಿಮರ್ಶಿಸುವ ಪರಂಪರೆ ಇಂದು ಬೆಳೆದು ಬಂದಿದೆ. ಉದಾಹರಣೆಗೆ ಬಸವಣ್ಣನವರು ಇವರು ವೀರಶೈವರು ಎಂದು ಲಿಂಗಾಯತರ ವಾದವಾದರೆ ಅವರ ವಚನಗಳ ಮೇಲೆ ಮತ್ತು ವಚನಗಳಲ್ಲಿ ಕಂಡು ಬರುವ ಆಚಾರ ವಿಚಾರ ಅವರ ಮನೋಧರ್ಮ ಸಾಮಾಜಿಕ ಪ್ರಜ್ಞೆಯನ್ನು ಇನ್ನೂ ಹಲವಾರು ವಿಚಾರಗಳು ಬಂದಿರುವುದು ನಮಗೆಲ್ಲಾ ಗೊತ್ತು. ಅದರಂತೆ ಬಸವಣ್ಣನವರು ಬ್ರಾಹ್ಮಣರ ಮತದವರು ಎಂದು ವಾದಿಸಿದರೆ ಡಾ॥ವೀರೇಶ ಬಡಿಗೇರರವರು ಇವರು ವಿಶ್ವಕರ್ಮ ಬ್ರಾಹ್ಮಣರು ಎಂದು

ತಮ್ಮ ನಿಲುವನ್ನು ಸಮರ್ಥಿಸುತ್ತಾರೆ,. ಇಂತಹ ಹಲವಾರು ಜಾತಿ ಪಂಗಡದವರು ಆವರವರ ಅಂದರೆ ವಿಮರ್ಶಕಾರರ ಆಧಾರದ ಮೇಲೆ ಇವರ ಹುಟ್ಟು ಪಡಗಿದೆ ಎಂಬುದು ಜಿಜ್ಞಾಸೆ. ಅದರಂತೆ ಇಲ್ಲಿ ಜೀವಣ್ಣ ಮಸಳೆಯವರು ಇಂತಹ ಕೆಲಸ ಮಾಡಿರಬಹುದು ಅಂತ ನಾನು ಭಾವಿಸಿಕೊಂಡರೂ ಅದಿನ್ನು ಜಿಜ್ಞಾಸೆಗೊಂಡಿದ್ದೇನೆ.

ಮನು (ಶಿವ) ಮಯ (ವಿಷ್ಣು) ತ್ವಷ್ಟ (ಬ್ರಹ್ಮ) ಶಿಲ್ಪಿ (ಇಂದ್ರ) ಮತ್ತು ವಿಶ್ವಜ್ಞ (ಸೂರ್ಯ) ಇವೈದು ವಿಶ್ವಕರ್ಮ ಪರಮಾತ್ಮನ ಮುಖಗಳು ಅರ್ಥಾತ್ ಐದು ತತ್ವಗಳು. ಶೀಲ+ಸಮಾಧೌ = ಶಿಲ್ಪ. ಶಿಲ್ಪ ಸಹಿತವಾಗಿರುವ ಜ್ಞಾನವೇ ನಿಜವಾದ ಬ್ರಾಹ್ಮಣ. ಕೇವಲ ತ್ರಯೀವೇದಗಳ ಯಜ್ಞ ಪರಿಣತಿಗಳು ಪೂರ್ಣ ಬ್ರಾಹ್ಮಣರಲ್ಲಿ ವಿಶ್ವಕರ್ಮ ಸಿದ್ಧಾಂತದಲ್ಲಿ ಕರ್ಮಯೋಗಕ್ಕೆ ಬಹಳ ಮಹತ್ವವಿದೆ. ಹೀಗಾಗಿ ಗೋಬ್ರಾಹ್ಮಣರಿಗೂ ವೈಶ್ವಕರ್ಮಣರಿಗೂ ಬಹಳ ಪೂರ್ವ ಕಾಲದಿಂದಲೂ ವೈಷಮ್ಯ. ಈರ್ಷೆಗಳು ಬೆಳೆದ ಅವು ರಾಮಾಯಣದ ಕಾಲಕ್ಕೆ ಉಲ್ಬಣಗೊಂಡು, ಗೋಬ್ರಾಹ್ಮಣರು ಶ್ರೀರಾಮನ ಮುಖಾಂತರ ರಾವಣೇಶ್ವರ ಮತ್ತು ರಾಕ್ಷಸ ಕುಲವನ್ನು ಧ್ವಂಸ ಮಾಡಲು ವ್ಯವಸ್ಥಿತವಾದ ಪ್ರಯತ್ನ ಮಾಡಿದರು. ಗೋಬ್ರಾಹ್ಮಣರು ಮತ್ತು ವಿಶ್ವಬ್ರಾಹ್ಮಣರಲ್ಲಿ ಬೃಹದಾಕಾರವಾಗಿ ಬೆಳೆದು ನಿಂತ ದಳ್ಳುರಿಯ ಕಿಡಿಗಳ ಮೊತ್ತವೇ ವಾಲ್ಮೀಕಿ ರಾಮಾಯಣ ಕತೆಯಾಗಿದೆ. ಇದಕ್ಕಿಂತ ಹೆಚ್ಚಿನದೇನೂ ಅದರಲ್ಲಿಲ್ಲ.

ವಾಲ್ಮೀಕಿ ರಾಮಾಯಣದ ಸುಂದರ ಕಾಂಡದಲ್ಲಿ ಉಲ್ಲೇಖಿಸುವಂತೆ ಹನುಮಂತ ಮೈನಾಕ ಪರ್ವತವನ್ನು ಲಂಘಿಸಿ ಸಮುದ್ರ ಪ್ರದೇಶದಲ್ಲಿ ಹಾರುತ್ತಾ ಸಾಗುವ ಸಂದರ್ಭದಲ್ಲಿ ಸುರಸೆ ಎಂಬ ಸರ್ಪಗಳ ತಾಯಿ (೨೦೬೦) ಇವಳು ಲಂಕೆಯನ್ನು ಪಾಲಿಸುತ್ತಿದ್ದ ರಕ್ಕಸಿ ವಿಷ್ಣು ಭಕ್ತೆ. ರಾವಣವಧಾ ನಂತರ ಲಂಕೆಯಿಂದ ಹಿಂದಿರುಗುವಾಗ ಇವಳನ್ನು ಸಂಗಡ ಕರೆತಂದು ಅಯೋಧ್ಯೆಯ ಕಾವಲಿಗೆ ನಿಯಮಿಸಿದನು.

ಸುರಾಸಾ ಇವಳು ದಕ್ಷ ಬ್ರಮ್ಮನ ಮಗಳು, ಕಶ್ಯಪನ ಹೆಂಡತಿ ನಾಗರನ್ನು ಹೆತ್ತವಳು. ಸುರಸಾ -ಸುರೆಸೆ ಈ ನಾಮಗಳ ಪದಗಳು ನಾಗವಂಶದ್ದು. ಹೆಚ್ಚು ಬಳಕೆಯಾಗಿವೆ. ನಾಗವಂಶದವು ವಿಶ್ವಬ್ರಾಹ್ಮಣ ವಂಶ ಸುರಸೆ ನಾಗ ವಂಶದವಳು ಎಂಬ ಸುಳಿವು ಸಿಗುತ್ತದೆ. ಸುರಸೆ ವಿಷ್ಣು ಭಕ್ತಳೆಂದು ಪುರಾಣ ನಾಮ ಚೂಡಾಮಣಿಯಲ್ಲಿ ವಿಶ್ವಬ್ರಾಹ್ಮಣರು ಮಯ ಸಂಪ್ರದಾಯದ ಸನಾತನ ಗೋತ್ರದವರು ವಿಷ್ಣು ಭಕ್ತರಾಗಿದ್ದಾರೆ. ಶಿವ ವಿಷ್ಣು, ಬ್ರಹ್ಮ, ಇಂದ್ರ, ಸೂರ್ಯ ಈ ಪಂಚ ದೇವತೆಗಳ ಅಂದರೆ ಪಂಚಾನನನಾದ ವಿಶ್ವಕರ್ಮ ಪರಮಾತ್ಮನ ಪಂಚಮುಖಗಳು ಸುರಸೆ ವಿಷ್ಣು ಭಕ್ತಳಾಗಿರುವುದು ಸಾಧ್ಯವಿದೆ ಎಂಬುದು ಇವರ ವಾದ.

ಹನುಮಂತನು ವರುಣ ದೇವನ ಆಲಯವಾದ ಸಾಗರದ ಮೇಲ್ಭಾಗಕ್ಕೆ ಜಿಗಿದನು. ಆ ಸಾಗರವು ವಿಶ್ವವಸು ಗಂಧರ್ವನಿಂದ ಆಶ್ರಯಿಸಲ್ಪಟ್ಟಿದ್ದಿತು. (೨೦೬೫) ವಿಶ್ವಾವಸು ದೇವ ಗಂಧರ್ವರಲ್ಲಿ ಒಬ್ಬ. ಈ ಕಶ್ಯಪ ಮುನಿಯಿಂದ ಪ್ರಧೆಯಲ್ಲಿ ಜನಿಸಿದ. ಈತನು ಸ್ಥೂಲಶಿರನೆಂಬ ಮುನಿಯ ಶಾಪದಿಂದ ಕಬಂಧನೆಂಬ ರಾಕ್ಷಸನಾಗಿ ಜನಿಸಿ ರಾಮನ ಮೂಲಕ ವಿಮುಕ್ತಿ ಪಡೆದ. ಆ ಸಾಗರವು ಈ ವಿಶ್ವಾವಸು ವಿಶ್ವ ಬ್ರಾಹ್ಮಣನ ಆಶ್ರಯದಲ್ಲಿದ್ದಿತು. (ರಾಮಾಯಣದಲ್ಲಿ ವೈಶ್ವಕರ್ಮಣರು -೩ ಜೀವಣ್ಣ ಮಸಳೆ)

ರಾಮಾಯಣದಲ್ಲಿ ಸಿಂಹಿಕೆ ಎಂಬ ರಾಕ್ಷಸಿಯ ಪಾತ್ರ ಕಂಡು ಬರುತ್ತದೆ. (೨೦೬೬) ಸುಗ್ರೀವನು (ಕಿಷ್ಕಿಂಧಾ ಕಾಂಡ ಸರ್ಗ/೧೪)

ದಕ್ಷಿಣಸ್ಯ ಸಮುದ್ರಕ್ಕೆ ಮಧ್ಯೇ ತಸ್ಯನು ರಾಕ್ಷಸೀ!
ಅಜ್ಞಾರಕೇತಿ ವಿಖ್ಯಾತಾ ಛಾದೂಮಾಷೆಪ್ಯೆ ಭೋಜನೀ ।೨೬॥

ಎಂದು ಹೇಳಿದ ನುಡಿ ಹನುಮಂತನಿಗೆ ಜ್ಞಾಪಕಕ್ಕೆ ಬಂತು. ಸುಗ್ರೀವ ಹೇಳಿದ ರಾಕ್ಷಸಿ ಸಿಂಹಿಕಾ ಇವಳೇ ಅಗಿರಬೇಕೆಂದು ಊಹಿಸಿದನು. ಸಿಂಹಿಕಾ ಎಂಬ ಹೆಸರಿನವನು ದಕ್ಷ ಬ್ರಹ್ಮನ ಮಗಳಾಗಿದ್ದಳು. ಕಶ್ಯಪನ ಹೆಂಡತಿಯಾಗಿದ್ದಳು. ಹಿರಣ್ಯಕಲ್ಯಪನ ತಂಗಿಯ ಹೆಸರೂ ಸಿಂಹಿಕಾ. ಆದ್ದರಿಂದ ರಾಕ್ಷಸಿಯಾದ ಸಿಂಹಿಕಾ ಪದವು ವಿಶ್ವಬ್ರಾಹ್ಮಣ ರಕ್ಕಸರ ಸಂಸ್ಕೃತಿಯ ಪದವಾಗಿರುವುದು. ರಾವಣನ ಲಂಕೆಯು ವಿಶ್ವಬ್ರಾಹ್ಮಣ ಕುಲ ಸಂಸ್ಕೃತಿಯ ಸಾಮ್ರಾಜ್ಯವಾಗಿದ್ದಿತು. ಸುಮಾರಾಗಿ ಅಲ್ಲಿಯ ಹೆಸರುಗಳು ವಿಶ್ವಕರ್ಮ ಬ್ರಾಹ್ಮಣ ಸಂಸ್ಕೃತಿಯ ಪದಗಳೇ ಇರುವುದು ಸಂಪ್ರದಾಯ.

ರಾವಣನ ಸಾಮ್ರಾಜ್ಯವನ್ನು ಹನುಮಂತನು ಅದರ ಸೌಂದರ್ಯವನ್ನು ಕವಿ ವಾಲ್ಮೀಕಿ ಕವಿಯಿಂದ ಹೇಳಿಕೊಂಡಿದ್ದಾನೆ. ಅಗ್ರಭಾಗದಲ್ಲಿದ್ದ ಭವ್ಯವಾದ ಅರಮನೆಯನ್ನು ಕಂಡನು (೨೧೦೨) ಬಳಿಕ ವಾಯು ಪುತ್ರನಾದ ಹನುಮಂತನು ರಾವಣನ ಅರಮನೆಯಲ್ಲಿ ವಿಧ-ವಿಧವಾದ ಆಕಾರಗಳಿಂದ ಕೂಡಿದ್ದ ಪಲ್ಲಕ್ಕಿಗಳನ್ನು ಲತಾಗೃಹಗಳ್ಳು, ಚಿತ್ರ ಶಾಲೆಗಳನ್ನು ಆಟದ ಮನೆಗಳನ್ನು ಮರದಿಂದ ಮಾಡಿದ ಕೃತ್ರಿಮ ಕ್ರೀಡಾ ಪರ್ವತಗಳನ್ನು ರಮ್ಯವಾದ ರತಿ ಗೃಹಗಳನ್ನು, ಹಗಲಿನ ವಿಹಾರಗೃಹಗಳನ್ನು ನೋಡಿದನು ಎಂದು ವಿವರವನ್ನು ನೋಡಿದಾಗ ಭೂ ಮಂಡಲದಲ್ಲಿಯೇ ಸಕಲಗುಣಗಳಿಂದ ವಿಶಿಷ್ಟವಾಗಿದ್ದ ವಿಶ್ವಕರ್ಮ ನಿರ್ಮಿತ ಆ ಸೌಧಗಳನ್ನು ಹನುಮಂತನು ನೋಡಿದನು ಎಂಬ ವಿವರವನ್ನು ನಾವು ನೋಡಿದಾಗ ಆಗಲೇ ಬಡಗಿ ವಿಶ್ವಕರ್ಮರ ಮೂಲ ತಿಳಿಯುತ್ತದೆ.

ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟಿದ್ದ ಅಂತಹ ಶ್ರೇಷ್ಠವಾದ ಪುಷ್ಪಕ ವಿಮಾನವನ್ನು ಹತ್ತಿದನು ಹನುಮಂತ ಎಂಬ ವಾಕ್ಯವನ್ನು ಜೀವಣ್ಣ ಮಸಳೆಯವರು ವಿವರಿಸುತ್ತಾರೆ.

ಸಂಪೂರ್ಣ ರಾಮಾಯಣ (ಗದ್ಯ ಪುಟ೧೫೨) ದಲ್ಲಿ ಜನಕ ರಾಜನ ವಂಶಾವಳಿಯನ್ನು ಹೇಳುತ್ತಾ ಪುಲಸ್ತ್ಯ ಬ್ರಹ್ಮನ ವಂಶದಲ್ಲಿ ಜನಕನ ಜನ್ಮವಾಗಿದೆ ಎಂದು ಹೇಳಲಾಗಿದೆ. ಪುಲಾಸ್ತ್ಯ ಬ್ರಹ್ಮ ವಿಶ್ವಬ್ರಾಹ್ಮಣ, ರಾವಣನ ತಂದೆಯ ತಂದೆ ಅಂದ ಮೇಲೆ ಜನಕ ಮಹಾರಾಜನು ವಿಶ್ವಬ್ರಾಹ್ಮಣ ವಂಶೀಯನೆಂಬುದು ತಿಳಿದು ಬರುತ್ತದೆ. ವಿಶ್ವಬ್ರಾಹ್ಮಣನಾದ ಜನಕರಲ್ಲಿ ಬೆಳೆದ ಸೀತೆಗೆ ವಿಶ್ವಬ್ರಾಹ್ಮಣ ಸಂಸ್ಕೃತಿಗನುಸಾರವಾಗಿ ಸಂಧ್ಯಾವಂದನೆಯನ್ನು ಮಾಡಿಕೊಳ್ಳುವ ರೂಢಿ ಮೊದಲಿನಿಂದಲೂ ಬಂದಿರಬೇಕು. (೨೨೧೫) 'ಭಗವತಿಯಾದ ನಿಕುಂಭಿಳಾಯೆಂಬ ಭದ್ರ ಕಾಳಿಯ ಸನ್ನಿಧಿಯಲ್ಲಿ ನರ್ತನ ಮಾಡೋಣ.'

ಇದರಿಂದ ಲಂಕೆಯ ಅರಸು ಮನೆತನದ ಕುಲದೇತೆಯು ಕಾಳಿಕಾ ದೇವಿಯ ಆಗಿರುವಳು. ಅವಳಿಗೆ ನಿಕುಂಭಿಳಾ ಎಂದು ಕರೆಯುವರು.

( ಶ್ರೀ ಕುವೆಂಪು ರವರು ರಾವಣನು ಶ್ರೀ ಕಾಳಿಕಾ ಬಕ್ತನೆಂಬುದನ್ನು ಬಹಳ ಚೆನ್ನಾಗಿ ಹೇಳುತ್ತಾ 'ಒಂದನಾ ಶಕ್ತಿ ಪೂಜೆಯೊಳಿರ್ದ ಬಾಳಿನೆತ್ರ ಸಮಾನಾ ದೈತ್ಯ ಸೇನಾಧಿಪಂ ದಿಟಂ ನೀನ್ ಮಹಾಕವಿ ದಿಟಂ ಜಗದ್ ರಂಗದೋಳ್, ಬರಿಕಲ್ಪನೆಯಲ್ತು, ಕೃತಿಗಳುಂ । ಕೊರೆಯುವ ಮಹಚೆಛಲ್ಪಿ ನೀಂ ದಿಟಂ' (ಶ್ರೀ ರಾಮಾಯಣ ದರ್ಶನಂ)

ವರಲೋಭಿ ಲೋಹಿತಾಂಬರ ಶೋಭಿ
ರಾವಣಂ ಹೋಮದೂಮಾವರಣ ನೀಲಾಭ
ಕಾಳಿಕಾ ಮೂರ್ತಿಯಂ ದಿಟ್ಟಿ ನೆಟ್ಟೀಕ್ಷಿಸುತೆ
ಕಾಯುತಿರ್ದನು ತನ್ನ ಭೀಷ್ಟಕ್ಕೆ ಮುಹೂರ್ತಮಂ
ತನ್ನಿಷ್ಟ ದೇವತಾ ವಿಷ್ಕಾರದಾ.........
ಮತ್ತೊಮ್ಮೆ ನೋಳ್ದನಾಕೆಯ ಹೃದಯದಾಳವಂ
ಮತ್ತಂ ಪರೀಕ್ಷಿಸುವೆನಾಕೆಯ ಪತಿವೃತಾ
ಸತ್ತ್ವಯಂ.

೨೨೦೭ ರ ಪುಟದಲ್ಲಿಯೂ ಹೇಳಿದ ಋಷಿಗಳೆಲ್ಲರೂ ವಿಶ್ವಬ್ರಾಹ್ಮಣರೇ. ರಾಕ್ಷಸರು ಶ್ರೀ ಕಾಳಿಕಾ ಭಕ್ತರೆಂಬುದು (೨೨೧೫ ಪುಟ) ದಿಂದ ತಿಳಿದು ಬರುತ್ತದೆ. ಶ್ರೀ ರಾಮಾಯಣನು ಶಕ್ತಿಯ ಪೂಜೆಯಲ್ಲಿ ನಿರತನಾಗಿದ್ದು ಶಿವನ ಸಮಾನನೆಂದು ಕುವೆಂಪು ಹೇಳುತ್ತಾರೆ.

'ಮಹಚ್ಛಿಲ್ಪಿ ನೀಂ ದಿಟಂ' ಎಂದು ಕುವೆಂಪು ಚಂದ್ರನಖಿಯ ಬಾಯಿಂದ ಹೇಳಿಸಿದ್ದಾರೆ. ಸ್ಪಷ್ಟವಾಗಿ ರಾವಣನು ಕಾಳಿಕಾ ಭಕ್ತನೆಂದು ಶ್ರೀ ಕುವೆಂಪು ಹೇಳುತ್ತಾರೆ. ಇದರಿಂದ ಶ್ರೀ ರಾವಣನು ವಿಶ್ವ ಬ್ರಾಹ್ಮಣ ಕುಲದವನೆಂಬುದನ್ನೆ ಸ್ಪಷ್ಟವಾಗುತ್ತದೆ.

ಈ ರೀತಿಯಾಗಿ ವಾಲ್ಮೀಕಿ ರಾಮಾಯಣದಲ್ಲಿ ವಿಶ್ವಕರ್ಮರ ಅಸ್ಥಿತ್ವವನ್ನು ಹಲವಾರು ವಿದ್ವಾಂಸರು ಅಧ್ಯಯನ ಮಾಡಿ ರಾಮಾಯಣದಲ್ಲಿ ಕೂಡ ಇವರ ಪಾತ್ರ ಇತ್ತು ಎಂಬುದನ್ನು ವಿವರಿಸಿ ವಿಮರ್ಶಿಸಿ ಹಲವು ಲೇಖನಗಳು ಹೊರ ಬಂದಿವೆ. ವಾದ-ವಿವಾದಗಳೂ ಏನೇ ಇದ್ದರೂ ಅದನ್ನು ಹೊಸ ಸಂಶೋಧನೆಗೆ ಅಳವಡಿಸುತ್ತಾ ತಮ್ಮ ಮನೋ ಭೂಮಿಕೆಯ ಪ್ರತಿಕ್ರಿಯೆಗಳು ಬಂದು ಹೋಗುತ್ತಲೆ. ಸತ್ಯಾ-ಸತ್ಯತೆಗೆ ನಮಗೆ ಅನಾವಶ್ಯಕ ಅಂತು ಅದೇ ಈ ಬಡಗಿಯ ನೈಪುಣ್ಯತೆ ಇತ್ತು ಎಂಬುದನ್ನೇ ತಿಳಿದುಕೊಳ್ಳಬಹುದು.

## ೩. ಉಪಕರಣಗಳ ನಿರ್ಮಾಣದ ಪರಂಪರೆ ಮತ್ತು ಪ್ರತಿಭೆ :

ಮಂಗನಿಂದ ಮಾನವ ಎಂಬ ಗಾದೆ ಮಾತು ಮನುಷ್ಯನ ಉಗಮಕ್ಕೆ ಕಾರಣವಾಯಿತು ಎಂದು ಅಭಿಪ್ರಾಯಪಡುತ್ತಾರೆ. ಅನಾಗರಿಕ ಸ್ಥಿತಿಯಲ್ಲಿದ್ದ ಮನುಷ್ಯ ಬರ ಬರುತ್ತಾ ತನ್ನ ಜೀವನ ಸುಧಾರಣೆಗೊಳ್ಳುವ ಸ್ಥಿತಿಗೆ ಅಂದರೆ ನಾಗರೀಕತೆಯನ್ನು ಬೆಳೆಸಿಕೊಂಡು ಬಂದ, ಅವಶ್ಯತೆಗೆ ಅನುಗುಣವಾಗಿ ತಮಗೆ ಬೇಕು ಬೇಡಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸಿದರು. ಈ ಪ್ರಯತ್ನ ಶೀಲತೆಯೇ ಉಪಕರಣಗಳ ನಿರ್ಮಾಣಕ್ಕೆ ಕಾರಣವಾಗಿರಬೇಕು ಎಂಬ ಅಂಶದಲ್ಲಿ ನನ್ನ ನಂಬಿಕೆ.

ಪ್ರಯತ್ನ ಶೀಲತೆಯ ಫಲವಾಗಿ ಮನುಷ್ಯ ಹಸಿ ಮಾಂಸ ತಿನ್ನುತಿದ್ದಂತವನು ಬೇಯಿಸಿ ತಿನ್ನುವುದನ್ನು ಕಲಿತ ನಂತರ ಅದನ್ನು ಅರೆದು ತಿನ್ನಬೇಕು ಎಂಬುದನ್ನು ಕಲಿತ. ಜೀವನೋಪಾಯಕ್ಕೆ ಯಾವುದಾದರೂ ಉದ್ಯೋಗ ಅವಶ್ಯಕವಾಗಿತ್ತು. ಪ್ರಾಣಿ ಸಾಕಾಣಿಕೆಯನ್ನು ಪ್ರಾರಂಭಿಸಿದ. ಅದಕ್ಕೆ ಪೂರಕವಾಗಿ ಕೃಷಿಯನ್ನು ಕಲಿತ. ಕೃಷಿಯನ್ನು ರೈತ ಮುಖ್ಯ ಉದ್ಯೋಗವನ್ನಾಗಿ ಮಾಡಿಕೊಂಡ. ಭಾರತದಲ್ಲಿ ಶೇಕಡ ೭೦-೮೦ ರಷ್ಟು ಕೃಷಿ ಕಾರ್ಮಿಕರು ಕಂಡು ಬರುತ್ತಿತ್ತು. ಆದರೆ ಇಂದು ಆಧುನಿಕತೆಯ ಜಳಕ್ಕೆ ಬಿದ್ದು ವಿಲವಿಲ ಒದ್ದಾಡುವ ಸ್ಥಿತಿಗೆ ಬಂದಿದ್ದಾರೆ. ಆ ಮಾತು ಬೇರೆ.

ಮನುಷ್ಯ ನಾಗರೀಕತೆಯ ಫಲವಾಗಿ ವ್ಯವಸಾಯವನ್ನು ಕಂಡುಕೊಂಡಾಗಿನಿಂದ ಅದಕ್ಕೆ ಪೂರಕವಾದ ಉಪಕರಣಗಳು ಅವಶ್ಯಕವಾಗಿದ್ದವು. ಮೊದಲು ನೆಲವನ್ನು ಕಲ್ಲಿನಿಂದ ಅಗೆದು ಹೆಂಡೆಗಳನ್ನು ಹೊಡೆದು ಬೀಜಗಳನ್ನು ಅಳತೆ ಇಲ್ಲದೆ ಅವ್ಯವಸ್ಥಿತವಾಗಿ ಉಗ್ಗುತ್ತಿದ್ದರು, ಮತ್ತು ಚೆಲ್ಲುತ್ತಿದ್ದರು. ಆಗ ಬೆಳೆ ಅಷ್ಟು ವ್ಯವಸ್ಥಿತವಾಗಿ ಬರುತ್ತಿರಲಿಲ್ಲ. ಅದಕ್ಕೆ ಮನುಷ್ಯ ಬುದ್ಧಿ ಶಕ್ತಿಯಿಂದ ಡೊಂಕಾದ ಕೋಲಿನ ಬದಲಾಗಿ ನೇಗಿಲನ್ನು ಕಂಡುಕೊಂಡ. ಹೇಗೆ ಬೇಕೋ ಹಾಗೆ ಬೀಜ ಚಲ್ಲುವ ಬದಲಾಗಿ ಮೂರು ಅಥವಾ ಎರಡು ತಾಳಿನ ಕೂರಿಗಿಯನ್ನು ಕಂಡು ಹಿಡಿದು ಬೀಜವನ್ನು ಉಳಿಸತೊಡಗಿದ. ನಂತರ ಹೊಲದಲ್ಲಿ ಹುಲ್ಲನ್ನು ಕಳೆಯಲು ಕುಂಟೆಯನ್ನು ಕಂಡುಕೊಂಡಿರಬೇಕು, ಎಂಬುದು ಗಮನಾರ್ಹ.

ಈ ಉಪಕರಣಗಳನ್ನು ತಯಾರಿಸಲು ವೃತ್ತಿ ವರ್ಗ ಬೇಕಾದಾಗ ಬುದ್ದಿವಂತ ಈ ಕೆಲಸವನ್ನು ಮುಂದುವರಿಸಿಕೊಂಡು ಬಂದ. ಅವರವರ ವೃತ್ತಿಯಿಂದ ವರ್ಗ, ಜಾತಿಗಳು ಉಗಮವಾಯಿತು. ಆ ವರ್ಗವೇ ಪಂಚಾಳರಲ್ಲಿ ಬಡಗಿಯು ಒಬ್ಬ.

ಉಪಕರಣಗಳ ನಿರ್ಮಾಣದ ಪರಂಪರೆ ಅಥವಾ ವರ್ಗವನ್ನು ಕುರಿತು ನಿಖರವಾಗಿ ಹೇಳುವುದು ಕಷ್ಟ ಸಂಗತಿಯಾಗಿದೆ. ಈ ಕುರಿತಂತೆ ಸಂಪ್ರದಾಯಕ ದೃಷ್ಟಿ ಒಂದು ಬಗೆಯದು ಅದು ಉಪಕರಣಗಳ ವರ್ಗವು ದೈವೀ ಮೂಲವಾದುದು ಎನ್ನುತ್ತೇವೆ. ಉಪಕರಣದ ಕಲೆಗಳು ತ್ರಿಮೂರ್ತಿಗಳಿಂದ ಋಷಿಗಳಿಗೆ, ಋಷಿಗಳಿಂದ ದೇವ ಮಾನವ, ನಂತರ ಎಲ್ಲರಿಗೂ ಬೋದಿತವಾಗಿ ಲೋಕದ ತುಂಬಾ ವಿಕಸನ ಹೊಂದಿದವು ಎಂದು ವೆಂಕಟೇಶಪ್ಪ ಯಶವಂತನಗರದವರು ತಿಳಿಸುತ್ತಾರೆ.

ಈ ಎಲ್ಲಾ ಉಪಕರಣವು ವಿಶ್ವಕರ್ಮನಿಂದ ಜನಿಸಿದವು ವೇದ, ಶಾಸ್ತ್ರ, ಪುರಾಣಗಳು ವಿಶ್ವಕರ್ಮನನ್ನು ಜಗತ್ತಿನ ಕರ್ತೃ ಎಂದು ಸೃನಶೀಲತೆಯ ರೂಪವಾಗಿ ಕಂಡಿವೆ. ಆದುದರಿಂದಲೇ ವಿಶ್ವಕರ್ಮನನ್ನು ವಿಶ್ವರಚನಾಕಾರ, ದೇವಶಿಲ್ಪಿ, ಕರಕುಶಲ, ಕಲಾಗುರು, ಸ್ಥಾಪಿತ ಕಲಾ ಪ್ರವೀಣ ಅಲ್ಲದೇ ದೇವೆಗಳ ವಾಸ, ಆಯುಧ, ಆಭರಣ ನಿರ್ಮಾಣಕಾರ ಎಂದು ಮುಂತಾಗಿ ವರ್ಣಿಸಿ ಅವನನ್ನು ಸಕಲ ಕಲಾಜನಕ, ಸಕಲ ಕಲಾ ಅಧಿಷ್ಠಾನ ದೇವತೆ ಎಂದು ಕರೆಯಲಾಗಿದೆ. (ಜಾನಪದ ವಿಶ್ವಕೋಶ ಸಂ-1 ಕನ್ನಡ ವಿ.ವಿ.).

ಬರೀ ವ್ಯವಸಾಯ ಉಪಕರಣಗಳ ಪರಂಪರೆಯಷ್ಟೇ ಅಲ್ಲ, ಎಲ್ಲಾ ಉಪಕರಣಗಳು ನಾಗರೀಕತೆ ಬೆಳೆದಂತೆಲ್ಲಾ ತನ್ನ ಅವಶ್ಯಕತೆಗನುಗುಣವಾಗಿ ಉಪಕರಣ ನಿರ್ಮಾಣವನ್ನು ಮಾಡಿಕೊಂಡು ಬಂದಿದ್ದಾನೆ. ಉಪಕರಣ ನಿರ್ಮಾಣಗಳ ಪರಂಪರೆಯಲ್ಲಿ

೧. ವ್ಯವಸಾಯ ಉಪಕರಣಗಳು
೨. ಗೃಹೋಪಕರಣಗಳು
೩.. ಸಾಂಸ್ಕೃತಿಕ ಉಪಕರಣಗಳು
೪. ಮನೋರಂಜನಾ ಉಪಕರಣಗಳು

ಇವೆಲ್ಲವುಗಳನ್ನು ಒಂದೊಂದಾಗಿ ಅಧ್ಯಯನಕ್ಕೆ ಒಳಪಡಿಸಿದ್ದೇನೆ. ಬರೀ ವ್ಯವಸಾಯ ಉಪಕರಣ

ಪರಂಪರೆಯ ಜೊತೆಗೆ ಗೃಹ, ಸಾಂಸ್ಕೃತಿಕ, ಮನೋರಂಜನಾ ಉಪಕರಣಗಳಿಗೂ ಪರಂಪರೆಯಿದೆ. ಮನುಷ್ಯ ಕಾಡಿನಲ್ಲಿ ಅಲೆಮಾರಿಯಾಗಿ ಜೀವಿಸುತ್ತಿದ್ದವನು ನಂತರ ಗುಹೆಗಳಲ್ಲಿ ವಾಸ ಮಾಡತೊಡಗಿದ. ಆಲೋಚನಾ ಲಹರಿ ಬೆಳೆದಂತೆಲ್ಲಾ ಒಂದೆಡೆ ವ್ಯವಸ್ಥಿತವಾಗಿ ಜೀವಿಸಲು ಮನೆಯನ್ನು ನಿರ್ಮಿಸಿಕೊಂಡ. ಮನೆಯಲ್ಲಿ ಉಪಯೋಗಿಸುವ ಸಾಮಾಗ್ರಿಗಳನ್ನು ತನ್ನ ವಿವೇಚನೆಯಿಂದ ಹೊಸ ನಾಗರೀಕತೆಯತ್ತ ಸಾಗಿದ. ಗೃಹ ನಿರ್ಮಾಣದಿಂದ ಹಿಡಿದು ಗೃಹ ಬಳಕೆಗಳಿಗೆ ಉಪಯೋಗವಾಗುವ ಸಾಮಾಗ್ರಿ ಅಥವಾ ಉಪಕರಣಗಳನ್ನು ಬಳಸತೊಡಗಿದ. ಇನ್ನು ಸಾಂಸ್ಕೃತಿಕ ಉಪಕರಣಗಳ ಪರಂಪರೆಗೆ ಬಂದರೆ ಅದಕ್ಕೂ ಅದರದೇ ಆದ ಇತಿಹಾಸ ಇದ್ದರೂ ಎಲ್ಲಾವುಗಳನ್ನು ಹೇಗೆ ? ಯಾರಿಂದ ? ಯಾವಾಗ ? ಎಂಬ ಪ್ರಶ್ನೆ ನಮ್ಮನ್ನು ಯಾವಾಗಲೂ ಕಾಡುತ್ತಿರುತ್ತದೆ. ಏನನ್ನಾದರೂ ಶೋಧಿಸಲು ಹೊರಟರೆ ದೈವೀ ಮೂಲಕ್ಕೆ ಹೋಗುವ ಪರಿಸ್ಥಿತಿ ಬರುತ್ತದೆ. ಇದಕ್ಕೆ ಭಾರತ ದೇಶದಲ್ಲಿ ಐತಿಹ್ಯ, ಕತೆ, ಪುರಾಣಗಳ ಕಂತೆಯನ್ನು ಬಿಚ್ಚಬೇಕಾಗುತ್ತದೆ. ಅದಕ್ಕೋಸ್ಕರನೇ ವಿದೇಶಿ ಸಂಶೋಧಕರು ಅಥವಾ ಪ್ರವಾಸಿಗರು ಭಾರತಕ್ಕೆ ಬಂದು ಏನಾದರೂ ತಿಳಿದುಕೊಳ್ಳಲು ಬಯಸಿ ಯಾರನ್ನಾದರೂ ಕೇಳಿದರೆ ಪುರಾಣಗಳು ಕತೆಗಳನ್ನು ಹೇಳಲು ಪ್ರಾರಂಭಿಸಿದರೆ ಅದು ಬೇಗನೇ ಮುಗಿಯುವುದಿಲ್ಲ ಎಂದು ಪ್ರವಾಸಿ ಅಲ್ಬೊರೋನಿಯ ಅಭಿಪ್ರಾಯಪಡುತ್ತಾರೆ.

ಇದು ಕೂಡ ಹಾಗೇನೆ ಆದರೂ ನಾವು ಜಗತ್ತಿನಲ್ಲಿ ಸಾಂಸ್ಕೃತಿಕವಾಗಿ ಬಲಿಷ್ಠವಾದ ದೇಶ ಎಂದರೆ ಭಾರತ. ಇಲ್ಲಿ ಕತೆ, ಪುರಾಣ, ಐತಿಹ್ಯಗಳು, ನಮ್ಮ ಜಾನಪದ ಹಾಡು ಇವೆಲ್ಲವುಗಳನ್ನು ನಾವು ಸಂಶೋಧನೆ ಮಾಡಿದರೆ ಅದರ ಪರಂಪರೆಯ ಮೂಲ ಸ್ವಲ್ಪ ಮಟ್ಟಿಗಾದರೂ ಸಿಗುತ್ತದೆ ಎಂಬ ನಂಬಿಕೆ ನನ್ನದು. ಅದು ಅನಿವಾರ್ಯವೂ ಕೂಡ.

ಇಂತಹ ಹಿನ್ನೆಲೆಯಲ್ಲಿ ಉಪಕರಣಗಳ ಪರಂಪರೆಯನ್ನು ನಮಗೆ ಅವಶ್ಯಕ ಹೊಸಯುಗ ಬಂದಂತೆಲ್ಲಾ ನಮ್ಮ ಸಂಸ್ಕೃತಿ ಆಚಾರ, ವಿಚಾರಗಳು, ನಡಾವಳಿಕೆಗಳು ಹಬ್ಬ ಹರಿದಿನಗಳು ಇತ್ಯಾದಿಗಳನ್ನು ನಮ್ಮ ಮೂಲ ಸ್ಥಿತಿಯನ್ನು ಒಂದು ಕಡೆ ಬದಿಗೊತ್ತಿ ನಮ್ಮ ಸಂಸ್ಕೃತಿಯನ್ನು ವಿನಾಶದ ಅಂಚಿನಲ್ಲಿ ತಳ್ಳುತ್ತಿದ್ದೇವೆ ಎನಿಸುತ್ತದೆ. ಇವೆಲ್ಲವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ದಾಖಲಿಸಿದರೆ ಮುಂದಿನ ಪೀಳಿಗೆಗೆ ಒಂದಂಶವಾದರೂ ನೆರವಾದೀತು ಎಂಬ ಆಶಯ ನನ್ನದು.

<u>ಪ್ರತಿಭೆ :</u>

ಪ್ರತಿಭೆ ಕರಕುಶಲ ಕರ್ಮಿಗಳಿಗೆ ಅವಶ್ಯವಾಗಿರುತ್ತದೆ. ಈ ಪ್ರತಿಭೆ ಇದ್ದರೆ ಮಾತ್ರ ಅವರ ಕಸಬುಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದಕ್ಕೆ ಸಾಧ್ಯ. ಕಲೆಯ ಹುಟ್ಟ ಪ್ರತಿಭೆಯಲ್ಲಾಗುತ್ತದೆ. ಪ್ರಜ್ಞೆಯಿಂದ ಅರಿಯುವ ಶಕ್ತಿ ಬರುತ್ತದೆ. ಪ್ರಜ್ಞೆಯಿಂದ ಅರಿಯುವ ಶಕ್ತಿ ಈ ಪ್ರತಿಭೆಗಿರುತ್ತದೆ. ಆದುದ್ದನ್ನು ನಾವು ನೆನೆಯುತ್ತೇವೆ. ಅದು ಸ್ಮೃತಿ ವರ್ತಮಾನದಲ್ಲಾಗುವುದನ್ನು ಪರಿಶೀಲಿಸುವುದೇ ಬುದ್ಧಿ ಭವಿಷ್ಯದಲ್ಲಾಗುವುದನ್ನು ಊಹಿಸುವುದು ಮತಿ ಈ ಮೂರನ್ನು ಪ್ರಜ್ಞೆ ಒಳಗೊಂಡಿರುತ್ತದೆ. ಕಲೆಯಲ್ಲಿಯೂ ಪ್ರಜ್ಞೆಯುಂಟು. ಪ್ರತಿಭೆಯು ಒಂದು ರೀತಿಯಲ್ಲಿ ಪ್ರಜ್ಞೆ ಎನಿಸುತ್ತದೆ. ಆದರೆ ಅದು ಚಿತ್ತ ವೃತ್ತಿ ಪ್ರಧಾನವಾದಾಗ ಮಾತ್ರ ಹುಟ್ಟುತ್ತದೆ.

ಈ ಪ್ರತಿಭೆಯ ಸಹಾಯದಿಂದ ಕಲೆಗೆ ಜೀವ ತುಂಬುವ ಕೆಲಸ ವಿಶ್ವಕರ್ಮನಿಗಿದೆ. ಕಲೆಗಾರನ ಪ್ರತಿಭೆಯಿಂದ ಕಲೆಯು ಹೊರ ಹೊಮ್ಮಬೇಕು. ಪ್ರತಿಭೆ ಎಂದರೆ ಹೊಳಪು ಎಂದಾಗುತ್ತದೆ. ಯಾವುದರಿಂದ ಹೊಳೆಯುವುದೋ ಅದೇ ಶಕ್ತಿ ಪ್ರತಿಭೆ ಎನಿಸುತ್ತದೆ. ಪ್ರತಿಭೆಯು ನಿಜವಾದ ಒಂದು ದೃಷ್ಟಿ. ಅದು ಬುದ್ಧಿಯ ಕಣ್ಣಲ್ಲ, ಹೃದಯದ ಕಣ್ಣು. ಕಲೆಗಾರ ಈ ಒಳಗಣ್ಣು ತೆರೆದಾಗಲೇ ಕಲೆಗೆ ಬೆಲೆ ಬರುತ್ತದೆ.

ಪರಾ ಪ್ರತಿಭೆ ಅರಳಿದಾಗ ಹೊಸದೊಂದು ವಿಶ್ವವೇ ಎದುರು ನಿಲ್ಲುತ್ತವೆ. ಸೃಷ್ಟಿಕರ್ತನಂತೆ ಇಚ್ಛೆಮಾತ್ರದಿಂದ ಕಲೆಗಾರ ಅಪೂರ್ಣ ಕಲ್ಪನಾ ಜಗತ್ತನ್ನೇ ನಿರ್ಮಿಸಿದ್ದಾನೆ. ದಂಡಿಯ ಕಾವ್ಯದರ್ಶಿಯಲ್ಲಿ ಹೇಳಿದ್ದಾನೆ.

ಆ ಕಾರಣಕ್ಕಾಗಿನೇ ಕನ್ನಡ ವಿಶ್ವಕೋಶದಲ್ಲಿ ಉಲ್ಲೇಖವಾಗಿರುವಂತೆ.

★ ಯಮನ ಅರಮನೆಯಂತೆ ನಿರ್ಮಿಸಿದವನು ವಿಶ್ವಕರ್ಮ.

★ ಪುಷ್ಪಕ ವಿಮಾನ ರಚಿಸಿದವನು ವಿಶ್ವಕರ್ಮ.

★ ಲಂಕಾನಗರ ವಿಶ್ವಕರ್ಮನಿಂದ ಸೃಷ್ಟಿಸಲ್ಪಟ್ಟಿದೆ.

★ ಶಿಲೋತ್ತಮೆ ಎಂಬುವಳು ವಿಶ್ವಕರ್ಮದಿಂದ ಸೃಷ್ಟಿಸಲ್ಪಟ್ಟವಳು.

★ ಸೂರ್ಯನ ಧೂಳಿನ ಕಣಗಳಿಂದ ಸುದರ್ಶನ ಚಕ್ರವನ್ನು ವಿಶ್ವಕರ್ಮ ಮಾಡಿದನು.

ಈ ಇವೆಲ್ಲವೂಗಳ ರಚನೆಗೆ ಪ್ರತಿಭೆಯನ್ನುವುದು ವಿಶ್ವಕರ್ಮನಲ್ಲಿ ಲೀನವಾಗಿತ್ತು ಎಂಬುದನ್ನು ತೋರಿಸುತ್ತದೆ.

"ಅಪೂರ್ಣವಸ್ತು ನಿರ್ಮಾಣಕ್ಷಮಾ ಪ್ರಜ್ಞಾಪ್ರತಿಭಾ" ಈ ಮೊದಲು ಇಲ್ಲದಂತಹ ವಸ್ತುವನ್ನು ಸೃಷ್ಟಿಸುವುದು ಪ್ರತಿಬೆ, ಅದರ ಶಕ್ತಿ ಅದ್ಭುತ ಕ್ಷಣ ಕ್ಷಣಕ್ಕೂ ಹೊಸ ವಿಷಯಗಳನ್ನು ಸೂಚಿಸಬಲ್ಲದು. ಒಂದು ವಿಷಯಕ್ಕೆ ಹೊಸದನ್ನು ತೋರಿಸಬಲ್ಲದು ನಾವಿನ್ಯತೆಯೇ ಪ್ರತಿಬೆಯ ಮುಖ್ಯಲಕ್ಷಣ.

ಹೇಮಚಂದ್ರನು ಪ್ರತಿಭೆಯನ್ನು ಎರಡುಬಾಗಗಳಲ್ಲಿ ವಿಂಗಡಿಸಿದ್ದಾನೆ. ಒಂದು ಸಹಜ ಇನ್ನೊಂದು ಔಪಾಧಿಕ ಸೂರ್ಯನಿಗೆ ಪ್ರಕಾಶದಂತೆ ಆತ್ಮನಿಗೆ ಜ್ಞಾನ ಸಹಜವಾದ ಬೆಳಗುವ ಜ್ಞಾನವೇ ಪ್ರತಿಭೆ ಸಹಜ ಪ್ರತಿಭೆ ಯಾದರೆ, ಮಂತ್ರ ದೇವಾತಾನು ಅಂಶಗಳಿಂದ ಜ್ಞಾನವರ್ಣೀಯಗಳನ್ನು ತೊಲಗಿಸಿದಾಗ ಬೆಳಗುವ ಪ್ರತಿಭೆಯೇ ಔಪದಿಕ ಪ್ರತಿಭೆ ಎಂದು ಹೇಳಿದ್ದಾನೆ. (ಭಾರತೀಯ ಕಾವ್ಯಮಿಮಾಂಶೆ ಸಮಗ್ರ ವಿವೇಚನೆ,ಹ,ರಾ,ಕಿದಿಯೂರು ಪುಟ ೫೦)

ಹೀಗೆ ಕೆಲವರಿಗೆ ಹುಟ್ಟಿನಿಂದ ಮತ್ತೆ ಕೆಲವರು ಹುಟ್ಟಿ ಪಡೆಯ ಬೇಕಾಗುತ್ತದೆ. ಈ ಬಡಗಿತನದ ಕೆಲಸದಲ್ಲಿಯೂ ಕೂಡಾ ಪ್ರತಿಭೆಗೆ ಹೆಚ್ಚಿನ ಪ್ರಾದಿನ್ಯತೆ ಬೇಕು. "ಆ ಬಡಗಿಯರು ಚೆನ್ನಾಗಿ ಮಾಡುತ್ತಾನೆ ಅವರ ಹತ್ತಿರ ಕೆಲಸಮಾಡಿಸಬೇಕು" ಎಂದು ಕೃಷಿಕರು ಎನ್ನುತಿರುತ್ತಾರೆ ಅಂದರೆ ಅವನಲ್ಲಿ ಕೆಲಸದ ನೈಪುಣ್ಯತೆ - ಕೈಗುಣ ಆಗಿರುತ್ತದೆ ಎಂದರ್ಥ.

ವಿಶ್ವಕರ್ಮರಲ್ಲಿ ಎಂತೆಂತಹ ಪ್ರತಿಭೆ ಗಳಿಲ್ಲ . ಅಮರ ಶಿಲ್ಪಿ ಜಕಣಾಚಾರಿ ಇತಿಹಾಸ ಪ್ರಸಿದ್ಧ. ರಾಜರ ಆಸ್ಥಾನದಲ್ಲಿ ಪ್ರತಿಭೆ ಇದ್ದವರಿಗೆ ಧಾನ ಮಾಡಿರುವುದುಂಟು , ಅಂದರೆ ಅವರಲ್ಲಿ ಅಂತಹ ಪ್ರತಿಭೆ ಇತ್ತು ಎಂದರ್ಥ . ಈ ದೇಶೀಯ ತಂತ್ರಜ್ಞಾನವಾದ ಈ ಬಡಿಗಿತನದಲ್ಲಿ ನೈಪುಣ್ಯತೆ ಪಡೆದಂತಹವರು ಇಂದು ಆಧುನಿಕರಣ ಪ್ರಭಾವದಿಂದಾಗಿ ತಮ್ಮ ಪ್ರತಿಭೆಯನ್ನು ಗುತರುತಿಸಲಿಕ್ಕೆ ಸಾದ್ಯವಾಗಿಲ್ಲವೆಂದು ಹೇಳಬಹುದು. ರಾಜ್ಯಸರ್ಕಾರದವರು ಪ್ರತಿ ವರ್ಷ ಕರಕುಷಲ ಕರ್ಮಿಗಳಿಗೆ ರಾಜ್ಯ ಪ್ರಶಸ್ತಿ ನೀಡಿ ಗೌರವಿಸುವುದುಂಟು, ಗುರುತಿಸಿಕೊಂಡವರಿಗಿಂತ ಎಲೆಮರೆಕಾಯಿಯಂತಿರುವ ಪ್ರತಿಭೆಗಳು ಪ್ರತಿಮೆಗಳಂತಾಗಿದ್ದಾರೆ.

ಬಾದಾಮಿಯಲ್ಲಿ ಇಂತಹ ಪ್ರತಿಭೆಗಳಿಗೆ ಬಳ್ಳಾರಿಯಲ್ಲಿ ಇಂತಹ ಪ್ರತಿಭೆಗಳು ಬೆಳುಗುತಿದ್ದಾರೆ. ಹಡಗಲಿಯ ಹಂಸನಂದಾಚಾರಿ, ಇಟ್ಟಗಿಯ ಜೀತೇಂದ್ರಚಾರ್ ರವರು ಪ್ರತಿಭೆಯ ಮೂಲಕ ತಮ್ಮ ಹೆಸರನ್ನು ಜೊತೆಗೆ ಕಲೆಯನ್ನು ಉಳಿಸಿಕೊಂಡುಬಂದಿದ್ದಾರೆ.

**ಗ್ರಾಮೀಣ ಪ್ರದೇಶದ ಪ್ರತಿಭೆಗೆ ಒಂದು ಉದಾಹರಣೆ ಕೊಡ ಬಯಸುತ್ತೇನೆ .**

ದಾವಣಗೇರಿ ಜಿಲ್ಲೆ ಹರಪನಹಳ್ಳಿ ತಾಲೂಕ ಯಲ್ಲಾಪುರದ ಮರಿ ವೀರಾಚಾರಿ ಚನ್ನಪ್ಪಾಚಾರಿಯು ಬಡಗಿತನ, ಕಮ್ಮಾರಿಕೆಯನ್ನು ಮೈಗೂಡಿಸಿಕೊಂಡು ಬಂದಂತವರು. ವ್ಯವಸಾಯದ ಉಪಕರಣಗಳನ್ನು ತಯಾರಿಸುವಲ್ಲಿ ನಿಪುಣರು ಮತ್ತು ಒಂದುವಸ್ತುವಿನಂತೆ ಮಾಡಬೇಕೆಂದು ತೀರ್ಮಾನಿಸಿದರೆ ಅದು ತಯಾರಾದಂತೆಯೇ.

ಇವರು ಬಂಡಿಯನ್ನು ತಯಾರಿಸಿದರೆ ಸರಿಸುಮಾರು ೨೦ ರಿಂದ ೨೫ ವರ್ಷ ಏನು ಆಗದಂತೆ ಮಾಡುವ ಪ್ರತಿಭೆ ಇವರಲ್ಲಿತ್ತು. ಅವರ ಹತ್ತಿರ ರೈತರು ಎರಡುವರ್ಷ ಮುಂಚಿತವಾಗಿ ಬಂಡಿಕೆಲಸಕ್ಕೆ ಹಾಕಬೇಕು. ಎರಡುತಿಂಗಳು ಅಥವಾ ಒಂದು ವರ್ಷದೊಳಗೆ ಮಾಡಿಕೊಡು ಎಂದರೆ ಕೆಲಸವನ್ನು ಮಾಡಲು ಒಪ್ಪುತಿರಲಿಲ್ಲ. ಇವರು ಬಡಗಿತನ , ಕಮ್ಮಾರಿಕೆ ಕಸಬನ್ನು ಅದ್ಬುತವಾಗಿ ಮಾಡಿ ತನ್ನ ಹೆಸರನ್ನು ಇನ್ನೂ ಜೀವಂತವಾಗಿರಿಸಿಕೊಂಡಿದ್ದಾರೆ. ಅವರ ನೈಪುಣ್ಯತೆಯನ್ನು ನೊಡಿದವರಿಗೆ ಗೊತ್ತು. ಆಶ್ಚರ್ಯ ವೆಂದರೆ ಅವರು ಯಾವುದೋ ಒಂದು ಕೇಸಿನಲ್ಲಿ ಸಿಗೆ ಬಿದ್ದಿದ್ದರು ಅವರಿಗೆ ಕೋರ್ಟಿನಿಂದ ನೋಟಿಸ್ ಬಂತು , ಆಗ ಇ ಕಟ್ಟಿಗೆ ಯಿಂದಲೇ ಸೈಕಲ್ ಮಾಡಿಕೊಂಡು ಕೋರ್ಟಿಗೆ ಹೊದರಂತೆ. ಆಗ ಇವರ ಕೌಶಲ್ಯಕ್ಕೆ ಮೆಚ್ಚಿ ಬೆರಗಾಗಿ ಮ್ಯಾಜಿಸ್ಟ್ರೇಟರು ರವರು ಅವರಿಗೆ ಬಹುಮಾನ ನೀಡಿ ನಿರಾಪರಾದಿಯೆಂದು ಘೋಷಿಸಿದ್ದರು ಎಂದು ಅವರ ಮಗ ಹೇಳಿದರು.

ಹೀಗೆ ಪ್ರತಿಭೆಗೆ ಸ್ಥಾನ ಇದೆ, ಅಂತಹ ಕೌಶಲ್ಯ ಹೊಂದಿದ್ದ ಇವರ ಮಗನುಕೂಡಾ ‘ಬೀಜದಂತೆ ಮರ ’ಎಂಬಂತೆ ಇವರ ಜಾಡಿನಲ್ಲಿಯೇ ಬಂದವರು ತಮ್ಮ ವೃತ್ತಿ ಪರಂಪರಾನುಗತವಾಗಿ ಮುಂದುವರಿಸುಕೊಂಡು ಬಂದಿದ್ದಾರೆ. ಅಂದರೆ ಪರಿಸರದ ಪ್ರಭಾವದಿಂದ ರಕ್ತಗತ ವಾಗಿಯೂ ಬಂದಿರಬಹುದು.

ಪ್ರತಿಭೆಗೆ ಇನ್ನೊಂದು ಉದಾಹರಣೆ ನೋಡಬಹದು.

"ಉದ್ಯೋಗ ಇಲ್ಲದವನು ಮಗನ ಮುಕುಳಿ ಕೆತ್ತಿದ್ನಂತೆ" ಎಂಬಗಾದೆ ಇಂದು ಅನರ್ಥಕ್ಕೀಡಾಗಿದೆ. ಅದರ ಮೂಲ ಸ್ವರೂಪನೇ ಬೇರೆ ಎಂದು ಹೇಳಿ ಸಮರ್ಥಿಸುತ್ತೇನೆ. ಬಡಗಿಯರು ದಿನ ಬೆಳಿಗ್ಗೆ ಕೆಲಸಮಾಡುವುದಕ್ಕಿಂತ ಮುಂಚೆ ತಾವು ಉಪಯೋಗಿಸುವ ಸಾಮಾನುಗಳನ್ನು ಅಂದರೆ ಉಳಿ, ಬಾಚಿ ,ಗರಗಸ, ಇತ್ಯಾದಿಗಳನ್ನು ಮಸೆಯುತ್ತಾರೆ. ಅದರಂತೆ ಒಬ್ಬ ಬಾಚಿಯನ್ನು ಮಸೆಯುತ್ತಾ ಇದ್ದಾ, ಆ ಬಾಚಿ ಹರಿತವಾಗುವವರೆಗೂ ಮಸೆಯುತ್ತಾರೆ. ಎಷ್ಟು ಮಸೆಯುತ್ತಾರೊ ಅದರಂತೆ ಕೆಲಸವು ಸಾಗುತ್ತದೆ. ಹೀಗೆ ಮಸೆಯುವುವಾಗ ಒಬ್ಬ ಸಣ್ಣ ಹುಡುಗ ಬರಿ ಮೈಲಿ ಓಡುವಾಗ ಕಾಲೆಡವಿ ಕೆಸರಮೇಲೆ ಬಿದ್ದ, ಸದ್ಯಕ್ಕೆ ಅಲ್ಲಿ ನೀರಿರಲಿಲ್ಲ ಇದನ್ನು ನೋಡಿದ ಬಡಗಿ ಮಸೆದಂತಹ ಬಾಚಿಯಿಂದ ಅವನ ಮೈಗೆ ಹತ್ತಿದ ಕೆಸರನ್ನು ಗೀಚಿ ತೆಗೆಯುತ್ತಿದ್ದ. ಮೇಲಿಂದ ಗೀಚಿದಾಗ ಅವನ ಮೈ ಮೊದಲಿನಷ್ಟೆ ಸ್ವಚ್ಚವಾಗುತ್ತಾ ಬಂತು, ಮುಕಳಿ ಹತ್ತಿರ ಕೆಸರು ತೆಗೆಯುತ್ತಿದ್ದಾಗ ಅದನ್ನು ನೋಡಿದ ಒಬ್ಬ 'ಉದ್ಯೋಗ ವಿಲ್ಲದ ಬಡಗಿ ಮಗನ ಮುಕುಳಿಕೆತ್ತಿದ' ಎಂದು ಅನರ್ಥಕೀಡಾಗಿತು. ಎನ್ನುವ ಮಾತಿನ ಜೊತೆಗೆ ಆ ಬಾಚಿಯನ್ನು ಮಸೆಯುಲಿಕ್ಕೊಕೂಡಾ ಪ್ರತಿಭೆ ಬೇಕು ಎನ್ನುವ ಮಾತಿದು.

ಗ್ರಾಮಾಂತರ ಪ್ರದೇಶದಲ್ಲಿ ಪ್ರತಿಭೆಗೆ ಕೊರತೆಯಿಲ್ಲ. ಅವರಿಗೆ ಸರಿಯಾದ ಮಾನ್ಯತೆ ದೊರೆಯದ ಕಾರಣ ಅವರು ನಗರಗಳಿಗೆ ವಲಸೆಹೋಗಿ ಜೀವಿಸುವ ಮಾರ್ಗ ಹುಡುಕುತಿದ್ದರಾದರು ಇನ್ನು ಜೀವಂತ ಇದೆ.

ಕುಂಬವನ್ನು ಹುಗುಲು (ಹೆಜ್ಜ) ಹೊಡೆಯುತ್ತಾರೆ. ಕುಂಬವನ್ನು ಹುಗುಲುಹೊಡೆಯಲಿಕ್ಕೆ ಕಡೆ ಉಳಿ, ಅಗಲಂಬುಳಿ, ಕೊಡ್ತಿ, ಇದ್ದರೆ ಸಾಕು . ಹುಗುಲುಹೊಡೆದ ಮೇಲೆ ಕುಂಬ ಸೊಸುವಾಗ ಕೊಡ್ತಿ ಕಡೇ ಉಳಿಯನ್ನಷ್ಟೆ ಇಟ್ಟು ಕೊಂಡು ಸೊಸುವುದಕ್ಕೆ ಅಗಲಂಬುಳಿಯನ್ನು ಬಳಸದೇ ಬಾಚಿಯಿಂದಲೇ ಕುಂಬಸೊಸುತ್ತಾರೆ ಎಂದರೆ ನಂಬಲು ಸಾದ್ಯವೆ ? ಸಾದ್ಯವಿಲ್ಲವಾದರೆ ಇಂತಹ ಪ್ರತಿಭೆ ತಳಕಲ್ಲು ಗ್ರಾಮದಲ್ಲಿದ್ದಾರೆ. ಅಷ್ಟು ಅಸಮಾನ್ಯವಾದುದನ್ನು ಮಾಡುತ್ತಾರೆಂದರೆ ಪ್ರತಿಭೆ ಕಾರಣ.

ಈ ರೀತಿ ವಂಶಪರಂಪರೆಯಾಗಿ ಪ್ರತಿಭೆ ಪರಿಸರದ ಪ್ರಭಾವದಿಂದ ಅಥವಾ ಪರಿಶ್ರಮದ ಫಲವಾಗಿ ಈಪ್ರತಿಭೆ ಬಡಿಗಿಯರಿಗೆ ಬರುತ್ತದೆ ಎಂದು ಹೇಳಬಹುದು.

ಕಟ್ಟಿಗೆ ಕೆಲಸ ಮಾಡಬೇಕಾದರೆ ತುಂಬಾ ಜಾಗರುಕತೆಯಿಂದ ಇರಬೇಕು. ಕಬ್ಬಿಣದ ಹಾಗೆ ಹೆಚ್ಚಾದರೆ ಕಡೆಯುವುದು ಕಡಿಮೆಯಾದರೆ ಹೀಚಿ ಬಡಿಯಬಹುದು ಅದರೆ ಕಟ್ಟಗೆಯನ್ನು ಕಡಿಮೆ ಮಾಡಬಹುದೇ ವಿನಹ ಹೆಚ್ಚು ಮಾಡಲು ಸಾದ್ಯವಿಲ್ಲ. ಮನಸ್ಸು ಒಂದುಕಡೆ ದೇಹ ಒಂದುಕಡೆಯಾದರೆ 'ಅಡ್ಡ ಬಡಗಿ'ಯೆನಿಸಿಕೊಳ್ಳುವುದು ಸಾಮಾನ್ಯ . ಆದಕ್ಕೆ ಬಡಗಿಯರಿಗೆ ಪ್ರತಿಭೆಯು ಅವಶ್ಯಕವಾಗಿ ಬೇಕು ಸ್ವಲ್ಪ ಹೆಚ್ಚು ಕಡಿಮೆಯಾದರು ಕೆಡುವ ಸಂಭವ ಇರುತ್ತದೆ. ಆದಕ್ಕಾಗಿ ಅತಿ ಸೂಕ್ಷ್ಮತೆ ಯಿಂದ ತನ್ನ ಪ್ರತಿಭೆಯಿಂದ ಕೆಲಸಮಾಡುತ್ತಾರೆ.

## ೩.೧. ಕೃಷಿ ಉಪಕರಣಗಳು :

ಕೃಷಿಯ ಮೂಲವನ್ನು ನಿಕರವಾಗಿ ಹೇಳಲು ಅಸಾದ್ಯ ಏಕೆಂದರೇ ಕೃಷಿ ನಾಗರಿಕತೆ ಪ್ರಾಚಿನವಾದುದು ಕೃಷಿಯು ಮನುಷ್ಯನ ಅತಿ ಪ್ರಾಚೀನ ಉದ್ಯೋಗ ವೆಂದು ಪರಿಗಣಿಸಲ್ಪಟ್ಟಿದೆ ಭೂಮಿ ರಚಿತವಾಗಿ ಅವರು ಮೇಲೆ ಸಸ್ಯ ಹಾಗೂ ಪ್ರಾಣಿ ವರ್ಗಗಳು ಕಾಣಿಸಿಕೊಂಡಾಗಿನಿಂದ ಇದುವರೆಗೆ ಆಗಿರುವ ಬೆಳವಣಿಗಳ ಕತೆ ಕುತೂಹಲಕಾರವಾಗಿದೆ. ಮೊದಲು ಸಸ್ಯ ಹೇಗೆ ಉದ್ಭವಿಸಿತು? ಯಾವ ರೀತಿಯ ಅದರ ಬೆಳವಣಿಗೆ ಪ್ರಾರಂಭವಾಯಿತು? ಮುಂದೆ ಅದುಹೇಗೆ ಅಭಿವೃದ್ದಿ ಹೊಂದಿತು? ಸಸ್ಯ ಜಾತಿಗಳಲ್ಲಿಯ ಸಹಾಸ್ರಾರು ವೈವಿಧ್ಯತೆಗಳ ಗುಟ್ಟೇನು? ಇವೆಲ್ಲ ಪ್ರಶ್ನೆಗಳಿಗೆ ಉತ್ತರ ಕೊಡಲು ಸಾದ್ಯವಾಗಿಲ್ಲ. ಈ ಬಗ್ಗೆ ಸತ್ಯಾಂಶವನ್ನು ಕಂಡುಹಿಡಿಯಲು ಅನೇಕ ಸಂಶೊದನೆಗಳನ್ನು ಕೃಗೊಳ್ಳಲಾಗುತ್ತದೆ ಆದರೂ ನಿರ್ದಿಷ್ಠ ಫಲ ದೊರೆತಿಲ್ಲ ಒಟ್ಟಿನಲ್ಲಿ ಸಸ್ಯಶಾಸ್ತ್ರದ ಗಹನತೆ ಸಾಮಾನ್ಯರ ತಿಳುವಳಿಕೆಗೆ ಮೀರಿದೆ ಎನ್ನಬಹುದು . ಆತ್ಮದಿಂದ ಆಕಾಶ, ಆಕಾಶದಿಂದವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ಪೃಥ್ವಿ ಇಂದು ಸೃಷ್ಟಿನಿಯಮದ ಕ್ರಮವೆಂದು ಹೇಳಲಾಗಿದೆ.

ಸುಮಾರು ೧೦,೦೦೦ ವರ್ಷಗಳ ಹಿಂದೆ ಮಾನವ ಹಲವಾರು ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ಹಸಿಯಾಗಿಯೇ ತಿಂದು ಜೀವಿಸುತ್ತಿದ್ದ. ಇದರಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಆಹಾರ ಹುಡುಕುತ್ತ ಸಂಚಾರ ಮಾಡುತ್ತಿದ್ದ. ಕ್ರಮೇಣ ಅವನ ಬಯಕೆಗಳು ಹಲವಾರು

ಸ್ವರೂಪಗಳನ್ನು ತಾಳಿ ಅಲೆದಾಟ ನಿಲ್ಲಿಸಿ, ಸಮೃದ್ಧವಾಗಿ ತನಗೆ ದೊರೆಯುವ ಸಂಪನ್ಮೂಲಗಳ ಹತ್ತಿರ ಜೀವಿಸಿ, ಬುದ್ಧಿ ವಿಕಾಸವಾದಂತೆಲ್ಲ ಅವಶ್ಯಕತೆಗೆ ತಕ್ಕಂತೆ ಕೃಷಿಯನ್ನು ರೂಢಿಸಿಕೊಂಡನು ಬರುತ್ತ ಮಾನವನಿಗೆ ಕೃಷಿ ಒಂದು ಜೀವನ ಕ್ರಮವೇ ಆಯಿತು ಇದೇ ಸಮಯದಲ್ಲಿ ಪಶುಪಾಲನೆಯು ಪ್ರಾರಂಭವಾಯಿತು.

ಇತ್ತೀಚೆಗೆ ದೊರಕಿರುವ ಪ್ರಾಚೀನ ಸಂಶೋಧನೆಗಳಿಂದ ಇರಾಕಿನ ಕುಚಿಖಿಸ್ಥಾನದ 'ಜಾರ್ ಮೊ' ಎಂಬ ಸ್ಥಳದಲ್ಲಿ ಮತ್ತು ಝಾಗ್ರೋಸ್ ಗುಡ್ಡಗಾಡು ಪ್ರದೇಶದಲ್ಲಿ ಸುಮಾರು ಕ್ರಿ.ಪೂ. ೬೦೦೦ ಮತ್ತು ೭೦೦೦ ವರ್ಷಗಳ ಹಿಂದೆ ಕೃಷಿ ಪಶುಪಾಲನೆ ಸಾಕಷ್ಟು ಮಟ್ಟಿಗೆ ಇತ್ತೆಂದು ತಿಳಿದುಬಂದಿದೆ. ಅಲ್ಲಿ ದೊರೆಯುತ್ತಿರುವ ಅವಶೇಷಗಳು ಈ ಪ್ರದೇಶಗಳಲ್ಲಿ ಗೋದಿ ಬೆಳೆ. ಮೇಕೆ ಸಾಕುವಿಕೆ ಇತ್ತೆಂದು ತೋರಿಸಿವೆ.

ಕ್ರಿ.ಪೂ. ೬೦೦೦ ರಲ್ಲಿ ಮೆಕ್ಸಿಕೊ ದೇಶದಲ್ಲಿ ಕುಂಬಳ, ಮೆಣಸು, ಇತ್ಯಾದಿಗಳನ್ನು ಬೆಳೆಯಲಾಗುತಿತ್ತು ಕ್ರಿ.ಪೊ. ೩೦೦೦ ವರ್ಷಗಳಷ್ಟು ಹಿಂದೆಯೇ ಚೀನಾದಲ್ಲಿ ಬತ್ತ ಬೆಳೆಯುತ್ತಿದ್ದರೆಂದು ಹೇಳಲಾಗಿದೆ. ಮೆಕ್ಸಿಕೊ, ಇಜಿಪ್ತ, ಯೂಪ್ರಟಿಸ್, ಬಯಲು ಸಿಂಧೂ, ಗಂಗಾನದಿಯ ಬಯಲುಗಳಲ್ಲಿ ಕೃಷಿ ಯ ಕುರುಹುಗಳು ಕಾಣಿಸಿವೆ. ಈಜಿಪ್ತ ದೇಶದಲ್ಲಿ ನೈಲ್ ನದಿಯು, ಬೆಬೀಲೊನಿಯದಲ್ಲಿ ಟೈಗ್ರಿಸ್ ಮತ್ತು ಯೂಪ್ರಿಟಿಸ್ ನದಿಗಳು ಬೆಳೆಗೆ ಬೇಕಾದ ನೀರನ್ನು ಒದಗಿಸುತಿದ್ದವು. ಮಹಾಪೂರಗಳಿಂದ ಭೂಮಿಗೆ ಫಲವತ್ತತೆಯ ಸಾರ ದೊರೆಯುತಿತ್ತು. ಯಾಂಗ್ ಟಿಸಿಕಿಯಾಂಗ್ ನದಿಯ ಕೊಳ್ಳದಲ್ಲಿ ಪುರಾತನ ಚೀನಾ, ಸಿಂಧೂ ಗಂಗಾನದಿಗಳ ಕೊಳ್ಳದಲ್ಲಿ ಭಾರತ, ನೈಲ ನದಿಯ ಲ್ಲಿ ಪುರಾತ ಈಜಿಪ್ತ, ಹಲವು ಕೊಳ್ಳಗಳಲ್ಲಿ ನೆಲಸಿದ್ದ ಗ್ರೀಕ ಸಾಮ್ರಾಜ್ಯ ಇವು ಆಗಿನಕಾಲದಲ್ಲಿ 'ಸಭ್ಯತೆಯ ತೊಟ್ಟಿಲು' ಗಳೆಂದು ಹೆಸರು ಪಡೆದಿದ್ದವು . ಪ್ರಾಚೀನ ಕಾಲದಲ್ಲಿ ಆಸ್ಥಳಗಳಲ್ಲಿ ಕೃಷಿಕೇಂದ್ರೀಕೃತವಾಗಿತ್ತು ಎನ್ನುವುದಕ್ಕೆ ಇದು ಸ್ಪಷ್ಟನಿದರ್ಶನ . ಈ ರೀತಿಯ ತಲತಲಾಂತರಗಳಿಂದಲೂ ಮಾನವನ ಬದುಕಿನಲ್ಲಿ ಕೃಷಿ ಮಂತ್ರ ನುಡಿಯತ್ತ ಬಂದಿದೆ. ಅನಾದಿಕಾಲದಿಂದಲೂ ಕೃಷಿ ಮಾನವನ ಬದುಕಿನ ಜೀವನಾಡಿಯಾಗಿದೆ ಯೆಂದೇ ಆವತ್ತೆ ಕೃಷಿಯ ಜೊತೆಗೆ ಕೃಷಿ ಉಪಕರಣಗಳ ಬಳಕೆ ಇತ್ತು ಎಂಬುದನ್ನು ನಾವು ತಿಳಿಯಬಹುದು.

ಕೃಷಿಕರ ಕೈಗಳ ಮುಂದುವರಿಕೆಯೇ ಕೃಷಿ ಉಪಕರಣಗಳ ಕೃಷಿತಂತ್ರ ಜ್ಞಾನದ ಮುಖ್ಯ ನೆಲೆಗಳು. ಈ ಉಪಕರಣಗಳ ವಿನ್ಯಾಸದಲ್ಲಿ ಸಿದ್ದಗೊಳಿಸುವ ವಸ್ತುಗಳ ಬಳಕೆಯಲ್ಲಿ ಕಂಡುಬರುತ್ತವೆ. ಕೊಯ್ಯುವ ಚಿಕ್ಕ ಕುಡುಗೊಲಿನಿಂದ ಹಿಡಿದು ಹಲವಾರು ಸಂಕೀರ್ಣ ಅಂಶಗಳಿರುವ ನೇಗಿಲುಗಳಿಂದ ಹಿಡಿದು ಬಂಡಿಗಳ ವರೆಗೂ ಉಪಕರಣಗಳ ವ್ಯಾಪ್ತಿ ಹರಡಿದೆ ಈ ವಿಬಾಗದಲ್ಲಿ ಕೃಷಿ ಉಪಕರಣಗಳ ವೈವಿಧ್ಯಮಯವನ್ನು ಪ್ರತಿ ನಿಧಿಸುವ ಪದ ಪದರಚನೆಗಳನ್ನು ನಾವು ನೋಡಬಹುದು. ಈ ಎಲ್ಲಾ ಉಪಕರಣಗಳನ್ನು ಅಂದರೆ ಕೃಷಿ ಉಪಕರಣಗಳ ಜೊತೆಗೆ ಪ್ರಮುಖಪಾತ್ರವಹಿಸುವುದು ಬಡಗಿಯರ ಕೈವಾಡ ಅಸಾಮಾನ್ಯವಾದದ್ದು, ಇವರು ಈ ಉಪಕರಣಗಳನ್ನು ವಂಶಪಾರಂಪರ್ಯವಾಗಿ ಬೆಳಸಿಕೊಂಡು ಬಂದಿರುವುದು ಗಮನಾರ್ಹ.

ನಾಡಿನ ಜನಜೀವನದ ಮುಖ್ಯವೃತ್ತಿಗಳಲ್ಲಿ ಕೃಷಿಯು ಒಂದು. ಕೃಷಿಯು ಸಂಸ್ಕೃತಿಯ ಆರ್ಥಿಕ ಚಟುವಟಿಕೆಗಳಲ್ಲಿ ಮಾನವ ಶಾಸ್ತ್ರಜ್ಞರು ಹೇಳುವಂತೆ 'ಪಶುಪಾಲನೆಯಂತಹ ಕಳೆದಮೇಲೆ ಅಥವಾ ಅದರೊಟ್ಟಿಗೆ ಬೆಳೆದು ಬಂದಿದಾಗಿದೆ ಆಹಾರ ಉತ್ಪದನೇ ಮುಖ್ಯಗುರಿಯಾಗಿದ್ದ ಈ ಚಟುವಟಿಕೆಯ ಸ್ವರೂಪ

ಸಹಸ್ರಾರು ವರ್ಷಗಳಿಂದ ತೀವ್ರ ರೂಪದ ಬದಲಾವಣೆಗೆ ಒಳಗಾಗದೆ ಉಳಿದಿದೆ'. ಆದರೆ ಆಧುನಿಕ ತಂತ್ರಜ್ಞಾನದ ಪ್ರವೇಶದಿಂದಾಗಿ ಕೃಷಿ ತನ್ನ ಸಾಂಪ್ರದಾಯಕ ಲಕ್ಷಣಗಳನ್ನು ಬಿಟ್ಟುಕೊಡುವುದು ಅನಿವಾರ್ಯವಾದರು ತನ್ನ ಮೂಲ ಸ್ಥಿತಿಯನ್ನು ನಾವು ಹಳ್ಳಿಗಳಲ್ಲಿ ಈಗಲೂ ನೋಡಬಹುದು. ಕೃಷಿಗೆ ಪೂರಕವಾದ ಉಪಕರಣಗಳ ಸ್ವರೂಪದಲ್ಲಿ ಪ್ರಾದೇಶಿಕ ಬಿನ್ನತೆ ಇರುತ್ತದೆ. ಈ ಬಿನ್ನತೆ ಆಯಾ ಪ್ರದೇಶದ ಕೃಷಿಯ ವಿಧಾನ ಅವಶ್ಯಕತೆಯನ್ನು ಅವಲಂಬಿಸಿರುವುದು ಸಹಜ.

ಮಾನವ ಹುಟ್ಟಿನಿಂದಲೇ ತನ್ನ ಅವಶ್ಯಕತೆಗನುಗುಣವಾಗಿ ತನ್ನ ಬೆಳವಣಿಗೆಯನ್ನು ಕಂಡುಕೊಂಡ, ಕೃಷಿಯನ್ನೆ ಅವಲಂಬಿತವಾಗಿ ಜೀವನ ಸಾಗಿಸುತ್ತ ಬಂದವನು. "ರೈತ ದೇಶದ ಬೆನ್ನೆಲುಬು". ಎಂಬ ವಿಚಾರವನ್ನು ಸಾರಿ ಸಾರಿ ಹೇಳುತ್ತಾ ಬಂದಿರುವುದು ನಮಗೆ ಗೊತ್ತಿರುವ ಸಂಗತಿ. ಕೃಷಿ ಯೆಂದು ಉಗಮವಾಯಿತು ? ಎಂಬ ಪ್ರಶ್ನೆ ಕಾಡುತಿದೆಯಾದರು ಕೃಷಿಯಜೊತೆಗೆ ಕೃಷಿ ಉಪಕರಣಗಳು ಹುಟ್ಟಿಕೊಂಡಿರಬಹುದು ಎಂದು ಅಂದಾಜಿಸಬಹುದು.

ರೈತರಿಗೆ ಅಥವಾ ಕೃಷಿಕರಿಗೆ ಹೊಲಗದ್ದೆಗಳನ್ನು ಉಳಿಮೆ ಮಾಡುವುದಕ್ಕೆ ವ್ಯವಸಾಯದ ಉಪಕರಣಗಳು ಬೇಕೆ ಬೇಕು ( ಗಳೇ ಸಾಮಾನುಗಳು). ಉಪಕರಣಗಳನ್ನು ತಯಾರಿಸಲು ಬಡಗಿಯರು ಅವಶ್ಯಕ ವಾಗಿದ್ದಾನೆ. ರೈತ ರಂಟೆ, ಕುಂಟೆ, ನೊಗ, ಕೂರಿಗೆ, ಬಂಡಿ, ಬ್ಯಾಕೊಲು(ನೆರೆಕೊಲು), ಹೆಡೆಕುಂಟಿ, ಇತ್ಯಾದಿಗಳನ್ನು ಮಾಡಿಸಲು ರೈತನು 'ಬಡಿಗಟಗೆಗೆ' ಬಂದು ಮಾಡಿಸಿಕೊಂಡು ಹೊಗುತ್ತಾರೆ ಅಥವಾ ಅವರನ್ನು ಕರೆದುಕೊಂಡು ಹೊಗಿ ಮಾಡಿಸಿಕೊಳ್ಳುತ್ತಾರೆ.

**<u>ಕೃಷಿ ಉಪಕರಣಗಳ ಪಟ್ಟಿ.</u>**

| | |
|---|---|
| ನೇಗಿಲು. | ಬಂಡಿ. |
| ಕೂರಿಗೆ. | ಏಣಿ. |
| ಕಿರುಗುಂಟೆ. | ತೊಟ್ಟುಮಣಿ. |
| ಬದ್ನಿಕುಂಟಿ. | ಕೊಡ್ಲಿಕಾವು. |
| ಬಳುಗುಂಟಿ. | ಕುರ್ಚಗಿ. |
| ಎಡೆಕುಂಟಿ. | ಸೆಡ್ಡಿ. |
| ಮೇಳಿ. | ಕೂರಿಗೆ ಬಟ್ಲು. |
| ನೊಗ. | ಗುದ್ಲಿ. |
| ಎಡೆಕುಂಟಿ ನೊಗ. | ಬಾರಿಕೊಲು. |
| ಬಂಡಿನೊಗ. | ಕಣಗ. |
| ನೆರೆಕೊಲು ( ಬ್ಯಾಕೊಲು). | ಕೊಳಕಣ್ಣಿ. |
| ಕುಡುಗೊಲು. | ಕಟಿಗಿತಾಳು. |
| ಗುದ್ದಿ. | ಗ್ವಾರಿ. |
| ಜಂತುಕುಂಟಿ. | |

ಇನ್ನು ಹತ್ತು ಹಲವಾರು ರೀತಿಯ ವ್ಯವಸಾಯ ಉಪಕರಣಗಳನ್ನು ರೈತರಿಗೆ ಬಡಗಿಯರು ತಯಾರು ಮಾಡಿಕೊಡುತ್ತಾರೆ. ಇವುಗಳಿಲ್ಲದೇ ವ್ಯವಸಾಯ ಹೇಗೆ ಸಾಧ್ಯವಿಲ್ಲವೊ ಬಡಗಿಯರು ಇಲ್ಲದೆ ವ್ಯವಸಾಯ ಉಪಕರಣಗಳಿಲ್ಲ. ಅದನ್ನು ಇಂದು ಬೇರೆ ಬೇರೆ ವರ್ಗದವರು ಮಾಡುತ್ತಾರೆ ಆ ಮಾತು ಬೇರೆ.

ಕೃಷಿ ಉಪಕರಣಗಳ ಪರಂಪರೆಯನ್ನು ಎರಡು ಮೂರು ಉದಾಹರಣೆಗಳನ್ನು ನಾವು ನೋಡಬಹುದು.

**ನೇಗಿಲು :-**

ಒಂದುವಸ್ತು ನಿರ್ಮಾಣ ವಾಗಿದೆ ಎಂದರೆ ಅದಕ್ಕೆ ತನ್ನದೇ ಆದ ಪರಪಂರೆ ಇದ್ದೇ ಇರುತ್ತದೆ. ನಿರ್ಮಾಣ ವಾದಂತಹ ವಸ್ತುವಿನ ಪರಂಪರೆಯನ್ನು ನಿಕರವಾಗಿ ಹೇಳದಿದ್ದರೂ ಅದರ ಕುರುಹು ಇದ್ದಲ್ಲಿನಿಂದ ನಾವು ನೋಡಿದರೆ ಅದಕ್ಕಿಂತಲೂ ಮುಂಚೆ ಇತ್ತು ಎಂಬುದನ್ನು ತಿಳಿಯಬೇಕಾಗುತ್ತದೆ.

ಕೃಷಿಗೆ ನೇಗಿಲನ್ನು ಬಳಸುವುದಕ್ಕಿಂತ ಮೊದಲು ಮೊನಚಾದ ಕಲ್ಲು ಕಟ್ಟಿಗೆ ಗಳಿಂದ ಮಣ್ಣನ್ನು ಅಗೆದು ನೆಡಲಾಗುತ್ತಿತ್ತು. ಇದರಿಂದ ನೆಲದ ಮೇಲಿನ ಪದರು ಮಾತ್ರ ತಿರುವಿ ಹಾಕಲ್ಪಡುತಿತ್ತು. ಕಾಲ ಬದಲಾದಂತೆ ಮಾನವ ಅನಾಗರಿಕತೆಯಿಂದ ನಾಗರಿಕತೆಗೆ ಕಾಲಿಟ್ಟನು. ಮುಂದೆ ಮರದಿಂದ ತಯಾರಿಸಿದ ನೇಗಿಲನ್ನು ಕೃಷಿಯಲ್ಲಿ ಅಳವಡಿಸಲಾಯಿತು. ಕಬ್ಬಿಣದ ನೇಗಿಲು ಮೊಟ್ಟಮೊದಲು ಕ್ರಿ.ಶ.ಪೂ.೪೦೦ ರಲ್ಲಿ ಬೆಳಕಿಗೆ ಬಂತು.★ (ಕೃಷಿ ಬೆಳವಣಿಗೆ - ಡಿ.ವೆಂಕಟ್‌ರಾವು.) ಮೊಟ್ಟ ಮೊದಲಿಗೆ ನೇಗಿಲಿನ ಬಳಕೆ ಕೃಷಿ ಇತಿಹಾಸದಲ್ಲೆ ದೊಡ್ಡ ಕ್ರಾಂತಿಯೆನ್ನೇ ಯೆಬ್ಬಿಸಿತು ಕ್ರಮೇಣ ಮಾನವನ ಬೆಳೆಯುತ್ತ ಪ್ರಾಣಿಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳಲು ಕೃಷಿಕ್ಷೇತ್ರ ಅನುಕೂಲ ಮಾಡಿಕೊಟ್ಟಿತು. ಬೇಸಾಯ ಮಾಡಬೇಕೆಂಬ ಮಾನವನ ಆಸೆಯೊಂದಿಗೆ ಕೃಷಿ ಉಪಕರಣಗಳು ಹೆಚ್ಚು ಹೆಚ್ಚಾಗಿ ಮಾನವನ ನಿಯಂತ್ರಣಕೊಳಗಾದವು.

ಮಹಾಭಾರತದಲ್ಲಿ ನೇಗಿಲನ್ನು ಬಲರಾಮನ ಆಯುಧವನ್ನಾಗಿಸಿಕೊಂಡಿರುವುದು ಉಲ್ಲೇಖಿತ ವಾಗಿದೆ. ಇದರಿಂದ ಆ ಕಾಲದಲ್ಲಿ ನೇಗಿಲಿನ ಪರಿಚಯ ಇತ್ತು ಎಂಬುದನ್ನು ಸೂಚಿಸುತ್ತದೆ.

ನೇಗಿಲು ಎಂಬ ಪದಕ್ಕೆ ಅನ್ವರ್ಥ ನಾಮ ರಂಟೆ ಇದನ್ನು ಮರದರಂಟೆ ಎಂದು ಕರೆಯುವರು , ಇದು ಬಾಗಿದಾಕಾರ ವಾಗಿರುತ್ತದೆ ಮುಂದೆ ಚೂಪಾಗಿ ಹಿರೆಬಾಚಿಯಿಂದ ಕೆತ್ತಲ್ಪಟಿರುತ್ತದೆ ಅದರ ಮೇಲೆ ಕಬ್ಬಿಣದ ಕುಳ ಬಿಗಿಯಾಗಿರುವಂತೆ ಜಿಗಿಳಿ ಎಂಬ ಕಬ್ಬಿಣದ ಮೊಳೆ ಬಡಿಯುತ್ತಾರೆ ಮೇಲ್ಗಡೆ ನೇಗಿಲಿಗೆ ಹುಗುಲು ಅಥವಾ ಪಾಸ್ ಹೊಡೆದಿರುತ್ತಾರೆ ಅದಕ್ಕೆ ಈಸು - ಈಚನ್ನು ಜೋಡಿಸುತ್ತಾರೆ ಇದನ್ನು ಹಿಡಿಯಲು ಮೇಳಿಯನ್ನು ಹಾಕಿರುತ್ತಾರೆ

ನೇಗಿಲು ದೊಡ್ಡ ಕ್ರಾಂತಿಯಕಹಳೆಯನ್ನು ಮೊಳಗಿಸಿತು ಮನುಕುಲದ ಮೇಲೆ ನೇಗಿಲಿನ ಪ್ರಭಾವಕ್ಕೆ ಒಂದು ಉದಾಹರಣೆಯನ್ನು ನಾವು ನೋಡಬಹುದು "ರಂಟೆ ಹೊತ್ತ ರೈತ ದೇಶಕ್ಕೆ ಅನ್ನಧಾತ " ಎಂಬ ಗಾದೆ ಮಾತು ಇದೆ ಇದು ಇದರ ಮಹಾತ್ವನ್ನು ತಿಳಿಸುತ್ತದೆ ಇವರನ್ನು ರಾಜಕಾರಣಿಗಳು ನೇಗಿಲನ್ನು ತಮ್ಮ ಚುನಾವಣೆಯ ಚಿಹ್ನೆಯನ್ನಾಗಿಸಿಕೊಂಡು ಅಧಿಕಾರದ ಗದ್ದಿಗೆಯನ್ನು ಅಲಂಕರಿಸಿ ರಾಜ್ಯವನ್ನು ಆಳಿದ

ಪ್ರಸಂಗ ನಮಗೆ ಗೊತ್ತಿರುವ ವಿಚಾರ ಅಂದರೆ ನೇಗಿಲಿನ ಪ್ರಭಾವ ಹೇಗಿದೆ ಎಂಬುವನ್ನು ನಾವು ತಿಳಿಯಬಹುದು.

**ಕೂರಿಗೆ :** ಭೂಮಿಯನ್ನು ಹದ ಮಾಡಿದ ನಂತರ ಬಿತ್ತನೆಯ ಕಾರ್ಯ ಪ್ರಾರಂಭವಾಗುತ್ತದೆ ಕೆಲವು ಬೀಜಗಳನ್ನು ಬಿಟ್ಟು ಉಳಿದೆಲ್ಲವುಗಳನ್ನು ಕೈಯಿಂದ ಚೆಲ್ಲುವುದು ವಾಡಿಕೆ ಇತ್ತು ಹೀಗೆ ಚಲ್ಲುವುದರಿಂದ ಬೀಜದ ಅಳತೆ ಸಿಗುತ್ತಿರಲಲ್ಲ ಮತ್ತು ಅಳತೆ ಪ್ರಮಾಣ ಹೆಚ್ಚಾಗುವುದಲ್ಲದೆ ಹದಮಾಡುವುದು, ಕಳೆ ಕೀಳುವುದು ಮುಂತಾದ ಕೆಲಸಗಳು ಕಷ್ಟವಾಗುತ್ತತ್ತು ಕಟ್ಟಿಗೆಯಿಂದ ಗೆರೆಹೊಡೆದೆ ಬಿತ್ತುತ್ತಿದ್ದ ರೈತ ಅದರ ಮುಂದುವರಿಕೆಯೇ ಕ್ರಮೇಣ ಮರದ ಕೊಂಗೆಗಳನ್ನು ಬಿತ್ತನೆಯ ಕಾರ್ಯಕ್ಕೆ ಬಳಸುವ ರೂಡಿ ಬಂದಿತು. ಸರಿಯಾಗಿ ಕೆಲಸ ಬಲ್ಲವನು ಬಳಸಿದರೆ ಕೂರಿಗೆಗಿಂತ ಬೇರೆ ಸುಲಭವಾದ ಉಪಕರಣ ವಿಲ್ಲ ಕೊಂಗೆಯ ಮೂಲಕ ಬೀಜಗಳನ್ನು ಬಿತ್ತಿದಲ್ಲಿ ಪೈರು ಸಾಲಾಗಿ ಬೆಳೆಯುತ್ತದೆ ಇದರಿಂದ ಸಾಲುಗಳ ಮಧ್ಯದಲ್ಲಿ ಕಳೆಕೀಳುವುದನ್ನು ಹರತೆ ಹೊಡೆಯುವದನ್ನು ಎತ್ತುಗಳ ನೆರವಿನಿಂದಲೇ ಮಾಡಬಹುದು ಇದರಿಂದ ನಾಗರೀಕತೆ ಬೆಳೆದಂತೆಲ್ಲ ಹೊಸ ಹೊಸ ಉಪಕರಣಗಳನ್ನು ಮುಗಿಸುವುದಕ್ಕೆ ಈಕೂರಿಗೆ ಸಹಾಯಕವಾಗಿದೆ.

ಎಲ್ಲ ಉಪಕರಣಗಳಿಗಿಂತ ಕೂರಿಗೆ ಉಪಕರಣಕ್ಕೆ ರೈತರು ದೈವಿ ಭಾವನೆಯಿಂದ ಕಾಣುವುದು ವಿಶೇಷ ಆಕಾಶದಲ್ಲಿ ಸಾಲಾಗಿರುವ ಮೂರು ಚುಕ್ಕೆಗಳನ್ನು ಈ ಕೂರಿಗೆ ತಾಳುಗಳಿಗೆ ಹೊಲಿಸುವುದುಂಟು ಹೀಗೆ ಈ ಉಪಕರಣಗಳ ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬಂದಿವೆ ಎಂದು ಹೇಳುವ ಮೊದಲು ದೈವೀ ಸ್ವರೂಪಗಳು ಎನ್ನುವುದುಂಟು.

**೩.೨. ಗೃಹೋಪಕರಣಗಳು :** ಮೊದಲು ಆದಿಮಾನವ ಅಡವಿಯಲ್ಲಿ ಮೃಗದಂತೆ ಅಲೆದಾಡುತ್ತ ಸಿಕ್ಕುದನ್ನು ಅಂದರೆ ಗಡ್ಡೆಗೆಣಸುಗಳನ್ನು ತಿಂದು ಹಸಿ ಮಾಂಸವನ್ನು ಬೇಟೆಯ ಮೂಲಕ ತಿನ್ನುತ್ತ ಇದ್ದ ಮನುಷ್ಯ ನಂತರ ಬೇಯಿಸಿ ತಿನ್ನುವುದನ್ನು ಕಲಿತ ತಮ್ಮ ಮಾನವನ್ನು ಉಳಿಸಿಕೊಳ್ಳಲು ನೆಡದಲ್ಲಿ ಸೊಪ್ಪನ್ನು ಸುತ್ತಿಕೊಳ್ಳುತ್ತಿದ್ದ. ಬೌದ್ಧಿಕ ಮಟ್ಟ ಬೆಳೆದಂತೆಲ್ಲ ಗುಹೆ, ಮರದ ಪೊಟರೆಯಲ್ಲಿ ವಾಸಿಸುತ್ತಿದ್ದ. ನಂತರ ಒಂದೆಡೆ ನೆಲೆಸಲು ಪ್ರಾರಂಭವಾದಾಗ ಅವರಿಗೆ ವಾಸ ಮಾಡಲಿಕ್ಕೆ ಮನೆಯ ಅವಶ್ಯಕತೆ ಇತ್ತು. ಅದನ್ನು ಮಾನವ ನಾಗರಿಕತೆ ಬೆಳೆದಂತಲ್ಲ ಆವಶ್ಯಕತೆಗಳನ್ನು ಕಂಡು ಕೊಂಡ.

ಮನೆಯನ್ನು ನಿರ್ಮಿಸಿದ ನಂತರ ಒಂದು ವರ್ಗ ತನ್ನವೃತ್ತಿಯನ್ನಾಗಿಸಿಕೊಂಡ ಅವರೇ ಬಡಗಿಯರಾದರು ಎನ್ನವುದು ಜನ ಜನತ ಬಡಗಿಯ ಅವಶ್ಯಕತೆ ಬರೀ ರೈತರು ಹೊಲಗದ್ದೆಗಳನ್ನು ಉಳಿಮೆ ಮಾಡಲು ಕೃಷಿ ಉಪಕರಣಗಳನ್ನು ನಿರ್ಮಿಸುವುದು ಅಷ್ಟೆ ಅಲ್ಲಾ ಗೃಹೋಪಕರಣಗಳ ಬಳಕೆಗಳನ್ನು ಇವರು ಕೈಹಾಕಿದರು. ಪ್ರತಿಯೊಂದು ರಂಗದಲ್ಲೂಯೂ ಇವರ ಸೇವೆ ಸಮಾಜಕ್ಕಿದೆ ಎಂದು ಹೇಳಿದರೆ ತಪ್ಪಾಗಲಾರದು. ಗೃಹೋಪಕರಣಗಳು ಎಂದರೆ ಮನೆಕಟ್ಟುವುದಷ್ಟೇ ಅಲ್ಲ ಮನೆಯಲ್ಲಿ ಉಪಯೋಗಿಸುವ ಪ್ರತಿಯೊಂದು ವಸ್ತುವಿನಿಂದ ಹಿಡಿದು ಮನೆಕಟ್ಟುವವರೆಗೂ ಇವರ ವ್ಯಾಪ್ತಿ ಬರುತ್ತದೆ.

ಗೃಹೋಪಕರಣಗಳ ಪಟ್ಟಿ

| | | |
|---|---|---|
| ಬಾಗಿಲು | ಕದ | ಅಟ್ಟ |
| ಕಂಬ | ಅಲ್ಮರ್ | ಮಜ್ಗಿ ಕಡ್ಗೋಲು |
| ಕನ್ನಡಿ ಪೆಟ್ಟಿಗೆ | ಮಂಚ | ಕಿಟಕಿ |
| ಕುಂದ್ರ ಮಣಿ | ಕುರ್ಚಿ | ಆರಾಮ ಕುರ್ಚಿ |
| ಕೊಣಗಿ | ಪೆಟ್ಗಿ | ಮಡ್ಗಿ |
| ತೊಟ್ಟಿಲು | ತೀರು | ತೊಲೆ |
| ತೊಲಿಕಂಬ | ಬೋದು | ಮೇಜು |
| ಲಟ್ಟಣ್ಗಿ | ವರ್ಸು | ಶ್ಯಾವಗಿ ಮಣಿ |
| ಸ್ಟೂಲು | ಅಡ್ಡುಣಗಿ | ಕೊಣಗಿ |
| ಹೋಳಿಗೆ ಮಣಿ | ಈಳಿಗಿ ಮಣಿ | ಕಪಾಟು |
| ಬೀರು | ಮುದ್ದಿ ಕೋಲು | ತೊಗ್ಗುಂಡು |
| ಒನಕೆ | ರಾಟಿ | ಭವಂತಿಗೆ |
| ಬಾವಿಯ ಗಡೆವು | ಕೈಮಗ್ಗ | ನೂಲುವ ರಾಟೆ |
| ರಂಗೋಲಿ ಬಟ್ಲ | | |

ಈ ಇನ್ನು ಅನೇಕ ರೀತಿಯ ಗೃಹಬಳಕೆಯ ವಸ್ತುಗಳನ್ನು ಬಡಗಿ ತಯಾರಿಸಿಕೊಡುತ್ತಾರೆ. ಹಿಂದಿನ ಮತ್ತು ಇಂದಿನ ಕಾಲದಲ್ಲಿ ಇವರು ಅತ್ಯವಶ್ಯಕವಾಗಿ ಕಂಡುಬರುತ್ತಾರೆ. ಗೃಹ ಬಳೆಕೆಯ ವಸ್ತುಗಳನ್ನು ಪಟ್ಟಿಮಾಡುತ್ತಾ ಹೋದರೆ ಇನ್ನು ಹಲವಾರು ಹೆಸರುಗಳುಳ್ಳ ವಸ್ತುಗಳು ಸಿಗುತ್ತವೆ. ಇಂತ ಸಾಮಾನುಗಳು ಇತ್ತೀಚಿಗೆ ಕಣ್ಮರೆಯಾಗುತ್ತಾ ಅವಸಾನ ಅಂಚಿನಲ್ಲಿದ್ದರೂ ಜಾನಪದವನ್ನು ಉಳಿಸಿ ಕೊಂಡು ಬಂದಿರುವುದು ಗ್ರಾಮೀಣ ಪ್ರದೇಶದಲ್ಲಿ ಕಾಣಬಹುದು ಏನೇ ಅನಿಸಿಕೊಂಡರು ಆಧುನೀಕರಣಕ್ಕೆ ಸಮಸ್ಯೆ ಹೇಳಿ ತಮ್ಮ ಮೂಲ ಆಶಯಕ್ಕೆ ಹಿಂದಿರುಗಲು ನಾವು ನಮ್ಮ ದೇಶಿತನವನ್ನು ಎತ್ತಿ ಹಿಡಿದರೆ ಮಾತ್ರ ನಮ್ಮ ಸಂಸ್ಕೃತಿ ಉಳಿಸಿಕೊಂಡು ಹೋಗಲು ಸಾಧ್ಯ.

ಎಂತ ಆದುನಿಕರಣಗೊಂಡರು ಮನೆಯ ವಾಸ್ತುವನ್ನೆ ಅವಲಂಬಿಸಿರುವುದು ಸಂತಂಸದ ವಿಷಯ ಹಿಂದೆ ಅಂತಹ ಮನೆಯನ್ನು ನಿರ್ಮಿಸಿಕೊಳ್ಳಲು 'ವಾಸ್ತು' ವನ್ನೇ ಅವಲಂಬಿಸಿರುತಿದ್ದರು . ವಾಸ್ತವವನ್ನೆ ಏಕೆ ? ಅವಲಂಬಿಸಬೇಕು ಎಂಬುದಕ್ಕೆ ಉತ್ತರ ಕೊಡುತ್ತದೆ.

ವಾಸ್ತ ಕಲ್ಪನೆ ಮೂಡನಂಬಿಕೆಯು ಎಂದು ಹೇಳುತ್ತಾರೆ ಆದರೆ ಅದು ಮೂಡ ನಂಬಿಕೆಯಲ್ಲ ಅದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದು ನಮ್ಮ ಪ್ರದೇಶಕ್ಕನುಗುಣವಾಗಿ ಮಾನ್‌ಸೂನ್, ಚಂಡಮಾರುತ, ನೈಸರ್ಗಿಕ ಹವಾಗುಣದ ಆಧಾರದ ಮೇಲೆ ಅಂದಿನ ಮಾನವ ತಾಂತ್ರಿಕ ಆಲೋಚನೆಯನ್ನು ಮಾಡುತಿದ್ದ ಎಂಬುದಕ್ಕೆ ಇದೇ ಸಾಕ್ಷಿ , ಈಶಾನ್ಯ ಮತ್ತನೈರುತ್ಯ ಮಾರುತಗಳು ನಮಗೆ ಅಪ್ಪಳಿಸಿವೆ. ಮುಖವಾಗಿ ಗಾಳಿ ಸಂಚಾರ ವಾಗುತ್ತದೆ. ಅದಕ್ಕೆ ನಮ್ಮ ಮನೆಯಲ್ಲಿ ಎಲ್ಲಡೆ ಗಾಳಿ ಬರಬೇಕು ಬಿರುಗಾಳಿ

ಬಂದಹಾಂಗ ಆಗಬಾರದು ಗಾಳಿಬರದಂಗೂ ಇರಬಾರದು ಅದಕ್ಕೆ ದಕ್ಷಿಣೋತ್ತರವಾಗಿ ಬಾಗಿಲನ್ನು ಇಟ್ಟರೆ ಪೂರ್ವ ಪಶ್ಚಿಮಕ್ಕೆ ಕಿಟಕಿಯನ್ನು ಇಡುತ್ತಾರೆ ಒಂದು ವೇಳೆ ಪೂರ್ವ ಪಶ್ಚಿಮಕ್ಕೆ ಬಾಗಿಲು ದಕ್ಷಿಣೋತ್ತರಕ್ಕೆ ಕಿಟಕಿಯನ್ನು ಇಟ್ಟರೂ ಅದಕ್ಕೆ ಕೆಲವೊಂದು ತಂತ್ರಗಳನ್ನು ಉಪಯೊಗಿಸುತ್ತಾರೆ. ಅಗ್ನಿ ದಿಕ್ಕಿಗೆ ಒಲೆಯನ್ನು ಹಾಕಬೇಕೆಂದು 'ವಾಸ್ತು ಶಾಸ್ತ್ರ' ಹೇಳುತ್ತದೆ. ಏಕೆ ಇದನ್ನು ಬೇರೆ ಕಡೆ ಹಾಕಬಾರದು ಎಂಬುದಕ್ಕೆ ನಿಯಮ ಇದೆ. ಈಶಾನ್ಯ ಮತ್ತು ನೈರುತ್ಯ ಗಾಳಿಬೀಸಿದರೆ ಮನೆಯಲ್ಲಿನ ಹೊಗೆಯು ಮನೆಯನ್ನು ಅವರಿಸಿಕೊಳ್ಳುತ್ತದೆ. ಆದರಿಂದ ವಾಸಮಾಡುವವರಿಗೆ ಆರೋಗ್ಯ ಕೆಡುತ್ತದೆ. ಎಂಬ ಆಲೋಚನೆಯಿಂದ ಅಂದಿನ ದಿನಮಾನಗಳಲ್ಲಿ ಇತ್ತು ಎಂಬುದು ತಿಳಿದು ಬರುತ್ತದೆ. ಹೀಗೆ ಕದ, ಬಾಗಿಲು, ಕಿಟಕಿ, ಗೃಹೋಪಕರಣಗಳಿಗೂ ಅಳತೆ ಇದೆ. ಅದರಂತೆ ಬಡಗಿ ತಯಾರುಸುತ್ತಾರೆ. ಅಳತೆ ಬಿಟ್ಟು ಮಾಡಿದರೆ ಇವನು **ಅಡ್ಡ ಬಡಗಿ** ಎನ್ನುತ್ತಾರೆಂದು. **ಎಂ. ವೀರಾಚಾರಿ ಮಲ್ಲಪ್ಪ ಮಾಗಳ**ರವರು ತಿಳಿಸುತ್ತಾರೆ.

ಗೃಹೋಪಕರಣಕ್ಕೆ ಬಳಸುವ ಕಂಬ ಮನುಷ್ಯನಿಗೆ ಮಾದರಿಯಂತೆ ಆ ಕಂಬ ಮನುಷ್ಯನಿಗೆ ಹೇಳುತ್ತಿದೆಯಂತೆ ' ಎಲೇ ಮಾನವ ನಾನು ನಿರ್ಜೀವಿ ಇಡಿ ಮನೆಯ ಬಾರವನ್ನು ಹೊತ್ತು ಕೊಂಡು ನೂರಾರು ವರ್ಷಗಳು ಅಲ್ಲದೇ ನಿನ್ನ ಮೊಮ್ಮಕ್ಕಳು ಕಾಲದವರೆಗೊ ಬಾರವನ್ನೆಲ್ಲ ಹೊತ್ತು ನನ್ನ ಕರ್ತವ್ಯವನ್ನು ಮಾಡುತ್ತೇನೆ ನೀನು ಒಂದು ನೂರು ವರ್ಷ ಜವಬ್ದಾರಿಯಿಂದ ಹೆಂಡತಿ, ಮಕ್ಕಳು, ಹಿರಿಯರು, ಕಿರಿಯರು ತೂಕವನ್ನು ತಡೆಯಲು ಆಗುವುದಿಲ್ಲ ನಿನಗಿಂತ ನಾನು ಎಷ್ಟೋಪಾಲು ಮೇಲು 'ಎಂದು ಮನುಷ್ಯನನ್ನು ನೊಡಿ ಪಶ್ಚತಾಪಪಡುತ್ತಿದೆ- ಎಂದು ಹಂಸನಾದಚಾರ್ಯ ಹಡಗಲಿಯವರು ತಿಳಿಸುತ್ತಾರೆ.

ಈ ರೀತಿಯಾಗಿ ಗೃಹೋಪಕರಣದ ಪ್ರಾಮುಖ್ಯತೆಯನ್ನು ಹೇಳುತ್ತಾ ಮನುಷ್ಯನಿಗೆ ಗೃಹಗಳು ಅವಶ್ಯವನ್ನು ಬಡಗಿ ಪೂರೈಸುತ್ತಿದ್ದಾನೆ.

### ೩.೩. ಸಾಂಸ್ಕೃತಿಕ ಉಪಕರಣಗಳು:

ಮನುಷ್ಯನು ಉಪಯೋಗಿಸುವ ವಸ್ತುಗಳು ಕೇವಲ ಬಳಕೆಗೆ ಮಾತ್ರವಲ್ಲ ಅನೇಕ ಸಂದರ್ಭಗಳಲ್ಲಿಯೂ ಕೂಡಾ ತನ್ನ ಮೇರೆಯನ್ನು ಗುರುತಿಸಲು ಸಾದ್ಯವಾಗಿಲ್ಲ ವ್ಯವಸಾಯದ ಉಪಕರಣದ ಜೊತೆಗೆ ಗೃಹ ಬಗೆಯ ವಸ್ತುಗಳ ವರೆಗೂ ಪ್ರತಿಯೊಂದು ವರ್ಗದ ಕೆಲಸಮಾಡಿರುವ ಕರಕುಶಲಕರ್ಮಿಗಳಿಗೆ ಅತ್ಯವಶ್ಯಕ ಈ ಪಾಂಚಳರಲ್ಲಿ ಬಡಗಿ ಒಬ್ಬ. ಅದರಂತೆ ಸಾಂಸ್ಕೃತಿಕ ಉಪಕರಣಗಳನ್ನು ನಾವು ನೋಡಬಹುದು ಅಂದರೆ ದೈವಿ ಬಾವನೆಯಿಂದ ಗುರುತಿಸಲ್ಪಡುವ ವಸ್ತುಗಳು. ಈ ಸಾಂಸ್ಕೃತಿಕ ಉಪಕರಣಗಳು ನಿನ್ನೆ ಮೊನ್ನೆವಲ್ಲ ನಮ್ಮ ಸಂಸ್ಕೃತಿಯ ಉಗಮ ಯಾವಾಗ ಆಯಿತೋ ಅಲ್ಲಿಂದ ಪ್ರಾರಂಭವಾಗಿ ಬೆಳೆದು ಕೊಂಡು ಬಂದಿದೆ.

ಸಾಂಸ್ಕೃತಿಕ ಸಂದರ್ಭಗಳಲ್ಲಿ ಅಂದರೆ ಊರುಗಳಲ್ಲಿ . ಉತ್ಸವಗಳಂಥ ಸಂದರ್ಭಗಳಲ್ಲಿ ನೆಡೆಯುವ ಹಬ್ಬ ಹರಿದಿನಗಳು ನೆಡೆಯುವುದು ಸಾಮಾನ್ಯ ಆಗ ತೇರು ಎಳೆಯುವುದು , ಹೊಸ ಮೂರ್ತಿ ಕೆತ್ತಿಸಿ ಪ್ರತಿಷ್ಠಾಪನೆ ಮಾಡುವುದು ದೇವರನ್ನು ಪಲ್ಲಕ್ಕಿಯಲ್ಲಿ ಹೋರುವುದು ಇತ್ಯಾದಿ ಸಂಸ್ಕೃತಿ ನಮ್ಮಲ್ಲಿ ಕಾಣಬಹುದು.

ಮೌರ್ಯ ಸಾಮ್ರಾಟ ಅಶೋಕನ ನಂತರದ ಕಾಲವಲ್ಲಿ ಬಾಜ್ಯಾವಲ್ಲಿ (ಮಹಾರಾಷ್ಟ್ರ) ಬೌದ್ಧ ಗುಹಾಲಯ ವೊಂದನ್ನು ನಿರ್ಮಿಸಲಾಯಿತು ಆಗುಹಾಲಯದಲ್ಲಿ ನ ಪ್ರತಿಯೊಂದು ರಚನೆ ನೇರವಾಗಿ ಮರದ ಮೂಲ ರಚನೆಯಿಂದ ಅನುಕರಣೆ ಮಾಡಲಾಗಿದೆ. ಅಲ್ಲದೆ ಈ ಗುಹಾಲಯದ ಇಕ್ಕಟ್ಟಿನ ಬಾಗಗಳನ್ನು ಮರದಿಂದಲೇ ಅಳವಡಿಸಲಾಗಿತ್ತು. ಇಂದಿಗೂ ಮರದ ರಚನೆಯ ಅಳಿದುಳಿದ ಬಾಗಗಳನ್ನು ನೋಡಬಹುದಾಗಿದೆ ಎಂದು ಸಿ.ಮಹಾದೇವರವರು ಬಳ್ಳಾರಿ ಜಿಲ್ಲೆಯ ಮರದ ವಾಸ್ತು ಶಿಲ್ಪದಲ್ಲಿ ಹೇಳುತ್ತಾರೆ- ನಂತರ ಮರದ ಕೆಲಸ ಮರೆಯಾಯಿತು ಆಸ್ಥಾನವನ್ನು ಶಿಲೆಯು ಆಕ್ರಮಿಸಿತು ಕಾರಣ ತಾಳಿಕೆಯ ಗುಣ. ಭಾರತದಲ್ಲಿ ಶಿಲೆಯನ್ನು ಬಳಸಿಕೊಂಡು ವಾಸ್ತು ಶಿಲ್ಪವು ಕ್ರಿ.ಪೂ. ೨೫೦ ರಿಂದ ಪ್ರಾರಂಭ ವಾಯಿತು ಎಂದು ತಿಳಿದು ಬರುತ್ತದೆ. ಹೀಗಾಗಿ ಕ್ರಿ.ಪೂ.೪೦೦ ರಲ್ಲಿ ಕಟ್ಟಡಗಳ ರಚನೆಯಲ್ಲಿ ಮರ ಪ್ರಮುಖ ಸಾಮಗ್ರಿಯಾಗಿತ್ತೆಂದು ಗುರುತಿಸಲಾಗಿದೆ.

ಹೀಗೆ ಮರದ ವಾಸ್ತು ಶಿಲ್ಪವು ಸಾಂಸ್ಕೃತಿಕ ಉಪಕರಣಕ್ಕೆ ತಳಪಾಯವಾಯಿತು ಎಂದು ಹೇಳಬಹುದು ಸಾಂಸ್ಕೃತಿಕವಾಗಿ ಉಪಯೋಗಿಸುವ ನಾವು ಅದ್ಯಾಯನ ಮಾಡಬಹುದು.

**ರಥ :-** ರಥಕ್ಕೆ ಇನ್ನೊಂದು ಅರ್ಥ ತೇರು ಇದರು ಹುಟ್ಟು ಎಂದಾಯಿತು ಎಂದು ಹೇಳವುದು ಅಷ್ಟೋಂದು ಸುಲಬದ ಕೆಲಸವಲ್ಲ. ಆದರೂ ಅದರ ಕುರುಹುಗಳು ಯಾವಾಗ ಸಿಗುತ್ತವೆ ಎಂಬುದನ್ನು ನಾವು ನೋಡಬಹುದು.

★ ರಾಮಾಯಣದಲ್ಲಿ ವಾಲ್ಮಿಕಿ ಕವಿಯ ರಥದ ಕುರುಹನ್ನು ಕೊಟ್ಟಿದ್ದಾರೆ. ರಾಜ ಮಹಾರಾಜರು ಪ್ರಯಾಣಮಾಡಲು ಮತ್ತು ಯುದ್ದ ಸಂದರ್ಭಗಳಲ್ಲಿ ಕಂಡುಬರುವ ರಥಗಳನ್ನು ನಾವು ತಿಳಿದುಕೊಳ್ಳಬಹುದು. ರಾಮಲಕ್ಷ್ಮಣ, ರಾವಣ, ಲವ ಕುಶ, ಇನ್ನು ಮುಂತಾದವರನ್ನು ಉಪಯೋಗಿಸುವುದು ಕಂಡುಬರುತ್ತದೆ.

★ ಮಹಾಭಾರತದಲ್ಲಿ ಪಾಂಡವರು ಕೌರವರು ರಥಗಳನ್ನು ಬಳಸುತ್ತಿದ್ದರು. ಅರ್ಜುನನ ಸಾರಥಿ ಕೃಷ್ಣ ರಥದ ಸಾರಥಿಯಾಗಿ ೧೮ ದಿನಗಳಕಾಲ ಯುದ್ದರಂಗದಲ್ಲಿ ಕೌರವರರ ದಮನಕ್ಕೆ ಗೀತೆಯನ್ನು ಉಪದೇಶಮಾಡುವುದು ರಥದಲ್ಲಿ ಇದ್ದೇ- ಆ ಕಾಲದಲ್ಲಿಯೂ ರಥದ ಬಳಕೆ ಇದೆ ಎಂದರೆ ಅದಕ್ಕಿಂತಲೂ ಮುಂಚಿತವಾಗಿ ಇದ್ದಿರಲೇ ಬೇಕು.

★ ವೇದಕಾಲದ ಆರ್ಯರಲ್ಲಿ ರಥ ಎಂಬ ವಾಹನ ವಿತ್ತೆಂದು ಖಚಿತವಿದೆ ಅದನ್ನು ತಯಾರಿಸುವರು ತ್ವಷ್ಟಾ ಎಂದು ಕರೆಯುತ್ತಾರೆ. ಕುದುರೆಯಿಂದ ಎಳೆಯಲ್ಪಡುವ ಎಕ್ಕಾಗಾಡಿ ರೂಪದಲ್ಲಿರುಬಹುದು.

ಇನ್ದ್ರೋ ಹರಿಯು ಯುಜೆ ಅಶ್ವಿನಾರಥ ಬೃಹಸ್ಪತಿ ರ್ವಿಸ್ವ ರೂಪಾಮು ಪಾಜತ
ಋಬುರ್ವಿಭ್ವಾ ವಾಜೋ ದೇವಾಂ ಅಗಚ್ಛ ಸ್ವಪ ಸೋಯಜ್ಞೀಯಂಭಾಗ ಮೈತಸ
ಋಗ್ವೇದ ೧, ೮೧: ೬

ಈ ಮಂತ್ರವು ಇಂದ್ರನಿಗೆ ಹರಿ ಎಂಬ ಅಶ್ವಗಳನ್ನೇ ಅಶ್ವಿನಿ ದೇವತೆಗಳಿಗೆ ರಥವನ್ನು ಬೃಹಸ್ಪತಿಗೆ ವಿಶ್ವರೂಪವೆಂಬ ಕಾಮದೇವನನ್ನು ಇವರು ಸೃಷ್ಟಿಸಿ ನೀಡಿದ್ದನ್ನು ಅವರು ಮೆಚ್ಚಿ ಸ್ವೀಕರಿಸಿದರು. ಅಮೃತತ್ವವನ್ನು ಹೊಂದಿದ ಋಭು ವಿಭಾವಾಜ, ಸೋವರತ್ರಯರು, ದೇವಗಣದ ಸಮೀಪ ಹೋಗಿ ಯಜ್ಞದ ಭಾಗಗಳನ್ನು ಗ್ರಹಿಸಿದರು ಎಂದು ತಿಳಿಸುತ್ತದೆ.

ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಕಂಡು ಬರುವ ದೇವಾಲಯದ ರಥಗಳು ಮರದ ರಚನೆಗಳಲ್ಲಿ ಮುಖ್ಯವಾಗಿವೆ. ಸಾಮಾನ್ಯವಾಗಿ ಪ್ರತಿಯೊಂದು ದೇವಾಲಯ ತನ್ನದೇ ಆದ ರಥವನ್ನು ಹೊಂದಿರುತ್ತವೆ. ವರ್ಷಕ್ಕೊಮ್ಮೆ ನಡೆಯುವಂತಹ ದೇವರ ಹಬ್ಬದ ದಿನ ಇದನ್ನು ಅಲಂಕರಿಸಿ ಎಳೆಯುತ್ತಾರೆ.

ಹಿಂದೂ ಪೂಜಾ ಪದ್ದತಿಯಲ್ಲಿ ಪ್ರದಕ್ಷಿಣೆಗೆ ಮಹತ್ವವಿದೆ. ಭಕ್ತರು ದೇವರಿಗೆ ಪ್ರದಕ್ಷಿಣೆ ಮಾಡಿದರೆ ರಥದಲ್ಲಿ ಕುಳಿತ ದೇವರು ಊರನ್ನೇ ಪ್ರದಕ್ಷಿಣೆ ಮಾಡುತ್ತದೆ. ಅಲಂಕಾರವಾಗಿ ತೇರು ಬೀದಿಗಿಳಿದಾಗ ದೇವಾಲಯವೇ ನಡೆದಂತಾಗುತ್ತದೆ. ಇದರಿಂದಾಗಿ ರಥವನ್ನು 'ಚಲಿಸುವ ದೇವಾಲಯ 'ಎಂದು ಕರೆಯುತ್ತಾರೆ. ಯಾವುದೇ ದೇವಾಲಯದ ರಥ ಕ್ರಿ.ಶ. ಸಂ. ೧೭ ಅಥವಾ ೧೮ನೇ ಶತಮಾನದ ಹಿಂದಕ್ಕೆ ಹೋಗುವುದಿಲ್ಲವೆಂದು 'ಜಾರ್ಜ್ ಮಿಷನ್ ' ರವರು ತಿಳಿಸುತ್ತಾರೆ. ಕರ್ನಾಟಕದಲ್ಲಿ ತೇರುಗಳ ನಿರ್ಮಾಣವನ್ನು ವಿಜಯನಗರೋತ್ತರ ಕಾಲದಿಂದ ಗುರುತಿಸಲಾಗುತ್ತದೆ. ಆದರೆ ಹಂಪೆಯ ವಿಠಲ ದೇವಾಲಯದಲ್ಲಿರುವ ಕಲ್ಲಿನ ರಥವನ್ನು ಗಮನಿಸಿದಾಗ ರಥಗಳ ನಿರ್ಮಾಣವನ್ನು ವಿಜಯ ನಗರ ಪೂರ್ವ ಕಾಲದಿಂದಲೂ ಗುರುತಿಸಬಹುದು. ರಥ ದುರಸ್ತಿಯಾದರೆ ಹಿಂದಿನ ರಥದ ಶೈಲಿಯನ್ನೇ ಸಂರಕ್ಷಿಸಿಕೊಂಡು ಬರಲಾಗಿದೆ. ತೇರುಗಳನ್ನು ತೇರುಗಡ್ಡೆ, ಗಡ್ಡಿತೇರು ಎಂದು ರಚನೆಯ ಶೈಲಿಯ ಮೇಲೆ ರಥ ನಿರ್ಮಾಣವು ಮರದ ಕಟ್ಟೆಯಂತೆ ಅಥವಾ ದಪ್ಪವಾಗಿ ಮತ್ತು ದುಂಡಾಗಿದ್ದನ್ನು ಗಡ್ಡಿ, ಗಡ್ಡೆ ತೇರು ಎಂದು ಕರೆಯುತ್ತಾರೆ. ಬಹುಶಃ ರಥಗಳ ಆಕೃತಿ ಸ್ಥಳೀಯರಿಗೆ ಮರದ ಗಡ್ಡೆಯಂತೆ ಕಂಡು ಬಂದಿರುವುದರಿಂದ ಗಡ್ಡಿ ತೇರು ಎಂದು ಕರೆದಿರುವ ಸಾಧ್ಯತೆಯೂ ಇದೆ.

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಸೋಗಿ ಗ್ರಾಮದಲ್ಲಿ ೧೮೯೯ ರಲ್ಲಿ ಗೋನಾಳ್ ಮಾನಪ್ಪ ಎಂಬುವವರು ವೀರಭದ್ರೇಶ್ವರ ತೇರನ್ನು ತಯಾರಿಸಿದ್ದಾರೆ. ಇದಕ್ಕೆ ದೈವಸ್ಥರು ಕೂಡಿ ಮಾಡಿಸಿದಂತಹದ್ದು ತೇಗದಕಟ್ಟಿಗೆಯಿಂದ ಮಾಡಿದ್ದು ಇಂದಿಗೂ ಮುಕ್ಕಾಗದೇ ಚಿತ್ರಕಲೆಗೆ ಸಾಟಿಯಿಲ್ಲ ಎಂಬಂತಿದೆ. ಇದಕ್ಕೆ ಬ್ರೇಕ್, ಸ್ಟೇರಿಂಗ್, ರೀತಿಯಲ್ಲಿ ಆವಾಗಲೇ ತಯಾರಿಸಿದ್ದಾರೆ ಎಂಬದನ್ನು ನೋಡಬಹುದು.

**ಪಲ್ಲಕ್ಕಿ :**

ದೇವಾಲಯಗಳಲ್ಲಿ ಕಂಡು ಬರುವ ಇತರ ಮುಖ್ಯ ಮರದ ರಚನೆಗಳೆಂದರೆ ಪಲ್ಲಕ್ಕಿ ಮತ್ತು ಮಂಟಪಗಳು. ಪಲ್ಲಕ್ಕಿಯ ಬಳಕೆಯನ್ನು ಹಂಪೆಯ ವಿರೂಪಾಕ್ಷ ದೇವಾಲಯದ ಮುಖ ಮಂಟಪದ ಚಾವಣಿಯಲ್ಲಿ ರಚಿಸಿರುವ ಭಿತ್ತಿ ಚಿತ್ರಗಳಲ್ಲಿ ಕಾಣಬಹುದು. ಈ ಚಿತ್ರಧಲ್ಲಿ ಮೆರವಣಿಗೆಯೊಂದರ ಸಂದರ್ಭದಲ್ಲಿ ಯತಿಯೊಬ್ಬರು ಪಲ್ಲಕ್ಕಿಯಲ್ಲಿ ಕುಳಿತಿದ್ದು, ಅದನ್ನು ನಾಲ್ವರು ಹೊತ್ತು ಸಾಗಿಸುತ್ತಿದ್ದಾರೆ.

ಪಲ್ಲಕ್ಕಿಗಳು ಸಾಮಾನ್ಯವಾಗಿ ೫ ಅಡಿ ಉದ್ದ ೨ ೧/೨ ಅಡಿ ಅಗಲ ೧೨ ಅಂಗುಲ ಎತ್ತರವನ್ನು ಹೊಂದಿರುತ್ತವೆ. ಪಲ್ಲಕ್ಕಿಯನ್ನು ರಚಿಸಲು ೧೨ ಅಂಗುಲ ಎತ್ತರಕ್ಕೆ ಸುತ್ತಲೂ ಮರದ ಹಲಗೆಯಿಂದ ಪೆಟ್ಟು ಬಾಗಿಲ್ಲದ ಆಕಾರದಲ್ಲಿ ಚೌಕಟ್ಟನ್ನು ನಿರ್ಮಿಸಲಾಗುತ್ತದೆ. ಪಲ್ಲಕ್ಕಿಯ ತಳಭಾಗದಲ್ಲಿ ಹಲಗೆಗಳಿಂದ ಜೋಡಿಸಲಾಗುವುದು. ಕೊಟ್ಟೂರಿನ ಬಸವೇಶ್ವರ ದೇವಾಲಯದಲ್ಲಿರುವ ಪಲ್ಲಕ್ಕಿಯೊಂದು ಸುಮಾರು ೧೨೦ ವರ್ಷಗಳಿಗೂ ಹಿಂದಿನದು. ಸಾಮಾನ್ಯವಾಗಿ ಗುರುಗಳ ಮೆರವಣಿಗೆಗಾಗಿ ಬಳಸಲಾಗುತ್ತದೆ. ಹಬ್ಬ ಹರಿದಿನಗಳಲ್ಲಿ ಮಳೆ ಬರದಿದ್ದಲ್ಲಿ ದೇವರು ಹೊರಡಿಸುವ ಕಾರ್ಯಕ್ರಮಗಳಲ್ಲಿ ಪಾಲ್ಕಿಯಲ್ಲಿ ದೇವರ ಮೂರ್ತಿಯನ್ನಿಟ್ಟುಕೊಂಡು ಅಲಂಕೃತವಾಗಿ ಮಾಡಿ ಮೆರವಣಿಗೆ ಮಾಡುತ್ತಾರೆ.

ಸೋಗಿಯ ವೀರಭದ್ರೇಶ್ವರ ದೇವಸ್ಥಾನಕ್ಕೆ ರಾಜ ಸೋಮಶೇಖರ ನಾಯಕ ಗುಡಿಯನ್ನು ಕಟ್ಟಿಸುವುದರ ಜೊತೆಗೆ ಪಲ್ಲಕ್ಕಿಯನ್ನು ಮಾಡಿಸಿಕೊಟ್ಟನೆಂದು ಪೂಜಾರಿ ಮಲ್ಲಪ್ಪರವರು ಐತಿಹ್ಯವನ್ನೇ ಹೇಳುತ್ತಾರೆ.

**ಮಂಟಪ ಮತ್ತು ಇತರ ದೇವರುಗಳ ರಚನೆ:**

ದೇವಾಲಯಗಳಲ್ಲಿ ಅಥವಾ ಮನೆಯ ದೇವರ ಕೋಣೆಯಲ್ಲಿ ದೇವರಿಗೆ ಮೀಸಲಾದ ಈ ಮಂಟಪ ದೇವಾಲಯವಿದ್ದಂತೆ ಇರುತ್ತದೆ. ಇದು ಸಾಂಸ್ಕೃತಿಕ ಉಪಕರಣಕ್ಕೆ ಸೇರಿದ್ದಾಗಿರುತ್ತದೆ.

ಮರದ ರಚನೆಗಳೆಂದರೆ ವಿರೂಪಾಕ್ಷ ದೇವಾಲಯದಲ್ಲಿರುವ ಮರದ ಮಂಟಪ ಇದು ಕೂರ್ಮ ಪೀಠದ ಮೇಲಿದ್ದು ಅತ್ಯುತ್ತಮ ರಚನೆಯಾಗಿದೆ, ಮಂಟಪದ ನಾಗ ಪ್ರತಿಮೆಯ ಇಧ್ದು ಮಂಟಪವನ್ನು ಗಾರೆಯಿಂದ ರಚಿತವಾದ ಕಮಾನಿನ ಗೂಡಿನೊಳಗೆ ಅಳವಡಿಸಲಾಗಿದೆ. ಮಂಟಪದ ಭಾಗಗಳನ್ನು ಹಿತ್ತಾಳೆ ತಗಡಿನಿಂದ ಕತ್ತರಿಸಿದ ಲತಾಬಳ್ಳಿಗಳಿಂದ ಅಲಂಕರಿಸಲಾಗಿದೆ,. ಇದೇ ದೇವಾಲಯದಲ್ಲಿರುವ ಮರದ ಉಯ್ಯಾಲೆ ಪೀಠಕ್ಕೆ ತಗಡಿನ ಹೊದಿಕೆ ಮಾಡಲಾಗಿದೆ. ವಿಶೇಷ ಸಂದರ್ಭದ ದೇವರ ಉತ್ಸವಮೂರ್ತಿ ಇಟ್ಟು ತೂಗಲಾಗುತ್ತದೆ. ನಾಗತಿ ಬಸಾಪುರದಲ್ಲಿರುವ ಮರದ ಮಂಟಪವನ್ನು ಹಾಲುಸ್ವಾಮಿ ಮುಳ್ಳುಗದ್ದಿಗೆ ಎಂದು ಕರೆಯುತ್ತಾರೆ. ವರ್ಷಕ್ಕೊಮ್ಮೆ ಹಾಲುಸ್ವಾಮಿ ದೀಕ್ಷೆ ಪಡೆದವರು ಈ ಮಂಟಪದಲ್ಲಿ ಮುಳ್ಳಿನ ಮೇಲೆ ಕೂತು ಮೆರವಣಿಗೆ ಮಾಡುತ್ತಾರೆ.

ಕೊಟ್ಟೂರಿನ ಬಸವೇಶ್ವರ ದೇವಾಲಯದಲ್ಲಿ ದೇವರನ್ನು ಕೂರಿಸುವ ಮಂಟಪದಂತಹ ಎರಡು ರಚನೆಗಳಿವೆ. ಈ ಮಂಟಪಗಳು ದಪ್ಪವಾದ ಕುಂಭಾಕಾರದಲ್ಲಿ ಕಾಲುಗಳನ್ನು ಹೊಂದಿವೆ. ಇದರ ಚೌಕಟ್ಟಿಗೆ ಹತ್ತಿ ಪಟ್ಟಿಗಳನ್ನು ಅಡ್ಡಡ್ಡವಾಗಿ ಕಟ್ಟಲಾಗಿದೆ. ಇವುಗಳನ್ನು ' ಮೊಗಲ್ ಚಕ್ರವರ್ತಿ ' ಅಕ್ಬರ್ ಮಾಡಿಸಿ ಕೊಟ್ಟನೆಂದು ಸ್ಥಳೀಯರು ತಿಳಿಸುತ್ತಾರೆ.

ಮೈಸೂರು ಅರಮನೆಯೂ ಕೂಡ ಅರಸರ ಆಳ್ವಿಕೆಯಲ್ಲಿ ತಯಾರಿಸಿದ ಬರೀ ತೇಗದ ಮರದಿಂದ ಈ ಅರಮನೆಯನ್ನು ಕಟ್ಟಲಾಗಿದೆ. ಅಲ್ಲಿ ಕೆಲವು ವರ್ಷಗಳ ಹಿಂದೆ ಬೆಂಕಿಗೆ ಆವುತಿಯಾದ ನಂತರವೂ ಮರದಿಂದ ತಯಾರು ಮಾಡಿದ್ದಾರೆ. ಅರಮನೆಯ ಶಿಲ್ಪ ಚಿತ್ರಗಳನ್ನು ತಮ್ಮ ಕೌಶಲ್ಯಪೂರ್ಣತೆಯಿಂದ ಕೆತ್ತಿದ್ದಾರೆ.

ಶಿಲ್ಪ ಕಲೆಗಳು ರಾಜಾಶ್ರಯ ಅಭಾವದಿಂದಾಗಿ ಹಿನ್ನಡೆಯನ್ನೇ ಅನುಭವಿಸಿದವು. ಆದರೆ ಜನ ಸಾಮಾನ್ಯರ ನಂಬಿಕೆ ಮತ್ತು ಆಚರಣೆಗಳಿಂದಾಗಿ ಬಳ್ಳಾರಿ ಭಾಗದ ಮರದ ಶಿಲ್ಪಕಲೆ ಮಾತ್ರ ಉಳಿದು ಬೆಳೆಯಿತು ಎಂದು ಸಿ.ಮಹಾದೇವರವರು ಅಭಿಪ್ರಾಯಪಡುತ್ತಾರೆ.

ನದಿಗಳನ್ನು ತಾಲೂಕಿನಲ್ಲಿ ದೊರೆತಿರುವ ಭಗ್ನಗೊಂಡ ವಿಷ್ಣುವಿನ ಪ್ರತಿಮೆ ಯಜ್ಞೋಪವಿತ ಮತ್ತು ಕಿರೀಟ, ಮುಕುಟ ಧರಿಸಿರುವ ಪ್ರತಿಮೆಯು ನಿಂತ ಭಂಗಿಯಲ್ಲಿದೆ. ವಿಜಯನಗರ ಶೈಲಿಯ ಶಿಲ್ಪ ಲಕ್ಷಣಗಳನ್ನು ಹೊಂದಿರುವ ಇದು ಕ್ರಿ.ಶ. ಸುಮಾರು ೧೬ನೇ ಶತಮಾನದ ರಚನೆ ಎಂದು ಸಿ.ಮಹಾದೇವರವರು ಬಳ್ಳಾರಿ ಜಿಲ್ಲೆಯ ಮರದ ವಾಸ್ತುಶಿಲ್ಪದಲ್ಲಿ ವಿವರಿಸಿದ್ದಾರೆ. ಹೀಗೆ ಮೂರ್ತಿಗಳಾದ ದ್ಯಾಮವ್ವ, ಊರಮ್ಮ, ದುರುಗಮ್ಮ, ಇನ್ನು ಅನೇಕ ಗ್ರಾಮದೇವ-ದೇವತೆಗಳ ಪ್ರತಿಮೆಗನ್ನು ವಿಶ್ವಕರ್ಮ ಜನಾಂಗಕ್ಕೆ ಸೇರಿದ ಬಡಿಗರೇರರು ಮಾಡುತ್ತಾರೆ. ಇವರನ್ನು ಮಯಮತರೆಂದು ಮಾಯಾಚಾರರೆಂದು ಕರೆಯುತ್ತಾರೆ. ಅಲ್ಲದೇ ಗ್ರಾಮ ದೇವತೆಗಳ ಅರ್ಚಕರು ಸಾಮಾನ್ಯವಾಗಿ ಬಡಿಗೇರರೇ ಆಗಿರುವುದನ್ನು ಇಂದಿಗೂ ಕಾಣಬಹುದು.

ಹೀಗೆ ಸಾಂಸ್ಕೃತಿಕ ಉಪಕರಣಗಳನ್ನು ಇನ್ನು ಹತ್ತು ಹಲವಾರುಗಳನ್ನು ತಿಳಿಸಬಹುದು.

೧. ರಥ ಅಥವಾ ತೇರು.
೨. ಆಯುಧಗಳು.
೩. ದೇವಾಲಯದ ಬಾಗಿಲು ಮತ್ತು ಕದ.
೪. ಪಲ್ಲಕ್ಕಿ.
೫. ಮಂದಾಸನ ಮತ್ತು ಮಂಟಪ.
೬. ಸೂಲಗಂಭ.
೭. ದ್ವಾರಬಾಗಿಲು.
೮. ಗರ್ಭಗುಡಿ ಬಾಗಿಲು.
೯. ದೀಪಸ್ಥಂಭ.
೧೦. ದೇವಿ ವಿಗ್ರಹಗಳು..
೧೧. ಛತ್ರಿ ಚಾಮರ.
೧೨. ನಂದಿಕೋಲು.
೧೩. ದೀವಟಿಗೆ.

ಹೀಗೆ ಇನ್ನು ಅನೇಕ ಸಾಂಸ್ಕೃತಿಕ ಉಪಕರಣಗಳನ್ನು ತಯಾರಿಸುವಸುವಲ್ಲಿ ಈ ಬಡಿಗರು ಸಿದ್ಧ ಹಸ್ತರು.

ಇವುಗಳನ್ನು ಸಾಂಸ್ಕೃತಿಕ ಸಂದರ್ಭಗಳಲ್ಲಿ ಪಲ್ಲಕ್ಕಿ ರಥ, ವಿಗ್ರಹಗಳು, ದೇಸ್ಥಾನಗಳಲ್ಲಿ ಉತ್ಸದ ಕಾರ್ಯಕ್ರಮ ನಡೆಯುವುದು ಸಾಮಾನ್ಯ. ವರ್ಷವಿಡೀ ದುಡಿದು ದಣಿದಿರುವಾಗ ಅವರಿಗೆ ವಿಶ್ರಾಂತಿ ಬೇಕು. ಅಂತಹ ಸಮಯದಲ್ಲಿ ಇಂತಹ ಸಮಾರಂಭಗಳು ನಡೆಯುತ್ತವೆ.

ಸಾಂಸ್ಕೃತಿಕ ಉಪಕರಣಗಳ ತಯಾರಿಕೆಯಲ್ಲಿ ಬಳಸುವ ವಿಧಾನ ಮಹತ್ವದ್ದು. ತಯಾರಿಸುವಂತಹ ವಸ್ತುವಿನ ಅಳತೆ, ಆಯಾ, ವಾಸ್ತು ಎಂಬ ಶಬ್ದ ಕರೆಯಲ್ಪಡುವ ವ್ಯವಸ್ಥಿತವಾದ ರೀತಿಯಲ್ಲಿ ತಯಾರಿಸುವಾಗ ವಾಸ್ತು ಶಾಸ್ತ್ರಕ್ಕೆ ಮೊರೆ ಹೋಗುತ್ತಾರೆ. ಆಯಾಕ್ಕೆ ತನ್ನದೇ ಆದ ಶಕ್ತಿಯಿದೆ. ಆಯಾ ಅಳತೆ ವಾಸ್ತು, ಇಲ್ಲದೇ ಯಾರು ಏನನ್ನು ತಯಾರಿಸುವುದಿಲ್ಲ.

ವಾಸ್ತು ಮಾಡನಂಬಿಕೆಯಲ್ಲ ಸಾಮಾನ್ಯವಾಗಿ ಗುಡಿಗಳನ್ನು ವಾಸ್ತು ರಚನೆಯಿಂದ ಕಟ್ಟಿರುತ್ತಾರೆ. ಮನೆಯನ್ನು ಕೂಡ ವಾಸ್ತು ರಚನೆಯಿಂದ ಕಟ್ಟಿರುತ್ತಾರೆ. ಆದರೆ ದೇವಸ್ಥಾನದಲ್ಲಿ ಹೋದಾಗ ಬರುವ ಭಾವನೆಗೂ ಮನೆಯಲ್ಲಿರುವಾಗಿನ ಭಾವನೆಗೂ ವ್ಯತ್ಯಾಸವಾಗುತ್ತದೆ. ದೇವಸ್ಥಾನದ ಒಳಕ್ಕೆ ಹೋದ ತಕ್ಷಣ ಅಥವಾ ತೇರು ಎಳೆಯುವ ಸಂದರ್ಭಗಳಲ್ಲಿ ನಮ್ಮ ಮನಸ್ಸು ದೈವೀಶಕ್ತಿಯಿಂದ ನಮ್ಮ ಮನಸ್ಸನ್ನು ಶಾಂತಗೊಳಿಸುತ್ತದೆ. ಇದು ಸತ್ಯ. ಆ ಸತ್ಯ ಅಡಗಿರುವುದು ಈ ವಾಸ್ತು ಶಾಸ್ತ್ರದಲ್ಲಿ ಎದು ಹಿರಿಯರು ಅಭಿಪ್ರಾಯಪಡುತ್ತಾರೆ.

ಬೀದಿಯಲ್ಲಿನ ಒಬ್ಬ ಹುಡುಗಿಯನ್ನು ಕಾಮಕ ದೃಷ್ಟಿಯಿಂದ ನೋಡಬಹುದು, ನೋಡುತ್ತಾರೆ. ಆದರೆ ದೇವಸ್ಥಾನದಲ್ಲಿ ಆ ಭಾವನೆ ಬಂದರೆ ಅವನು ಮನುಷ್ಯನಲ್ಲ ಕಾಮುಕ ಎನ್ನುವ ಅಭಿಪ್ರಾಯ ಇದೆ. ಅಂತಹ ಶಕ್ತಿ ಆ ಗುಡಿಗೆ ಇದೆ. ಆ ಗುಡಿ ವಾಸ್ತು ಶಾಸ್ತ್ರಕ್ಕೆ ಒಳಪಟ್ಟಿದೆ. ಅದಕ್ಕೆ ನೆಮ್ಮದಿ ಶಾಂತಿ ಇರುತ್ತದೆ ಎಂದು ಹಿರಿಯರು ಹೇಳುತ್ತಿರುತ್ತಾರೆ.

ವಾಸ್ತುವಿಗೆ ಸಂಕೇತವಾಗಿ ಗುಣಿಸಿದರೆ ಒಂದು ಬಂದರೆ ಧ್ವಜಾಯ, ಎರಡು ಬಂದರೆ ಕಕಾಯ, ಮೂರು ಬಂದರೆ ಸಿಂಹಾಯ, ನಾಲ್ಕು ಬಂದರೆ ಕರಾಯ, ೫ ಬಂದರೆ ವೃಷಬಾಯ, ೭ ಬಂದರೆ ಶೂನ್ಯಾಯ, ಇವು ಒಂದೊಂದು ವಾಸ್ತುವಿಗೆ ಶಾಸ್ತ್ರೀಯವಾಗಿ ಹೆಸರಿಟ್ಟಿದ್ದಾರೆ. ವಾಸ್ತುವಿಗೆ ತಕ್ಕಂತೆ ಅಳತೆ ಇರುತ್ತದೆ. ಇದರಲ್ಲಿ ಗುಣಕಾರ, ಭಾಗಾಕಾರ, ವ್ಯವಕಲನ, ಸಂಕಲನ ಈ ಲೆಕ್ಕಗಳನ್ನಿಟ್ಟುಕೊಂಡು ವಾಸ್ತುವಿನ ಅಳತೆ ಕಂಡುಕೊಳ್ಳುತ್ತಾರೆ. ಈ ಕೆಲಸವನ್ನು ಬಡಗಿಯರೇ ಮಾಡುತ್ತಾರೆ.

ಸಾಮಾನ್ಯವಾಗಿ ಮನೆಗೆ ಧ್ವಜಾಯ ವನ್ನು ಸಾಂಸ್ಕೃತಿಕ ಉಪಕರಣಗಳಿಗೆ ಸ್ಥಳಗಳಿಗೆ ಸಿಂಹಾಯ ವಾಸ್ತುವನ್ನು ಇಟ್ಟರೆ ಒಳ್ಳೆಯದು ಎಂಬ ಭಾವನೆಗಳು ಬೆಳೆದುಕೊಂಡು ಬಂದಿದೆ.

ಹೀಗೆ ಗೃಹ ಮತ್ತು ಸಾಂಸ್ಕೃತಿಕ ಉಪಕರಣಗಳಿಗೆ ಹೆಚ್ಚಿನ ಮಹತ್ವ ಇರುವುದು ಈ ವಾಸ್ತುವಿನ ಹಿನ್ನೆಲೆಯು ಕೂಡ ಒಂದು. ಹೀಗೆ ಪ್ರಾಚೀನ ನಂಬಿಕೆಗಳು ಯಾವುದೇ ತಂತ್ರದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುತ್ತವೆ ಎಂಬುದಕ್ಕೆ ಒಂದು ಉದಾ :

ನಮ್ಮೂರಿನ ವೀರಭದ್ರೇಶ್ವರ ರಥ ಇದೆ. ಜಾತ್ರೆ ಆಗುತ್ತದೆ ಕೂಡ. ಆ ತೇರು ತುಂಬಾ ಸುಂದರವಾಗಿದೆ. ಯಾವಾಗಲೊ ತಲೆಮಾರಿನವರು ತಯಾರಿಸಿದ ತೇರು ಇಂದಿಗೂ ಮುಕ್ಕಾಗಿಲ್ಲ ಅದನ್ನು ನೋಡಿದರೆ ಈಗ ತಾನೇ ಕೆತ್ತಿದ್ದಾರೇನೋ ಎಂಬಂತೆ ಇದೆ. ಲಕ್ಷ್ಮಿ, ಪಾರ್ವತಿ, ಕಾಳಿಕಾದೇವಿ, ಚೌಡಮ್ಮ, ಇತ್ಯಾದಿ ದೇವತೆಗಳ ಚಿತ್ರಗಳು ಇವೆ. ನಾನು ಸಣ್ಣವನಿದ್ದಾಗಿನಿಂದಲೂ ನೋಡುತ್ತಾ ಬಂದಿದ್ದೇನೆ. ಆ ತೇರಿನಲ್ಲಿ ಅಶ್ಲೀಲ ಚಿತ್ರಗಳು ಕೆತ್ತಿದ್ದರು. ಯಾಕೆ ಇಂತಹ ಚಿತ್ರಗಳನ್ನು ಕೆತ್ತಿದ್ದಾರೆಂದು ಹಿರಿಯ

ವ್ಯಕ್ತಿಯೊಬ್ಬರನ್ನು ಕೇಳಿದೆ. ನೀನಿನ್ನು ಸಣ್ಣವಾ, ನಿನಗೆದಕ ಬೇಕು ಎಂದರು. ಹೇಳು ಅಜ್ಜ ಎಂದೆ ಆಗ ಅವರು ಎರಡು ಕಾರಣಗಳನ್ನು ನೀಡಿದ.

ಮೊದಲನೆಯದು ಈ ಸೌಂದರ್ಯವನ್ನು ನೋಡಿ (ತೇರನ್ನು) ಕೆಟ್ಟ ದೃಷ್ಟಿಯಿಂದ ಅಬ್ಬಾ ಎಂಥಹ ತೇರು ಎಂದರೆ ಆ ತೇರು ಸಿಡಿದು ಹೋಗುತ್ತದೆ. ಆಗ ಆ ಚಿತ್ರನೋಡಿ ತೂ ಎಂದರೆ ಅಲ್ಲಿಗೆ ಅವನ ಕೆಟ್ಟ ದೃಷ್ಟಿ ಬೀರುವುದಿಲ್ಲ ಎಂದು, ಮತ್ತೊಂದು ರೀತಿಯಲ್ಲಿ ಹೇಳಿದ ಈ ಅಶ್ಲೀಲ ಚಿತ್ರಗಳು ಸಾಮಾನ್ಯವಾಗಿಲ್ಲ. ಗಂಡು ಹೆಣ್ಣು ಸಂಭೋಗ, ಗಂಡು ಗಂಡು ಸಂಭೋಗ, ಗಂಡು ಪ್ರಾಣಿಗಳ ಸಂಭೋಗ, ಹೆಣ್ಣು ಪ್ರಾಣಿಗಳ ಸಂಭೋಗ ಚಿತ್ರಗಳು ಇವೆಯಲ್ಲಾ ಅವು ಹೊಸದಾಗಿ ಮದುವೆಯಾದ ಮದುಮಕ್ಕಳಿಗೆ ಇವುಗಳು ತಿಳುವಳಿಕೆಯನ್ನು ಕೊಡುತ್ತವೆ. ಅದಕ್ಕೆ ಇಂತಹ ಚಿತ್ರಗಳನ್ನು ಕೆತ್ತಿದ್ದಾರೆ. ಇವನ್ನು ಸುಮ್ಮನೆ ಯಾರು ಕೆತ್ತುತ್ತಾರೆ ಹೇಳು ಎಂದು ನನ್ನನ್ನೇ ಪ್ರಶ್ನಿಸಿದ್ದ - ಈ ರೀತಿಯಾಗಿ ನಂಬಿಕೆಗಳಿವೆ. ಅದಕ್ಕೆ ಸಾಂಸ್ಕೃತಿಕ ಸಂದರ್ಭಗಳಲ್ಲಿ ಇವು ಸಾಮಾನ್ಯ.

**೩.೪. ಮನೋರಂಜನಾ ಉಪಕರಣಗಳು :**

ಮನುಷ್ಯನಿಗೆ ಜೀವನ ಎಷ್ಟು ಮುಖ್ಯವೋ ಆ ಜೀವನದಲ್ಲಿ ಮನೋರಂಜನೆಗಳು ಕೂಡ ಅಷ್ಟೇ ಪ್ರಾಮುಖ್ಯತೆ ಇವೆ. ಜಾನಪದರು ದುಡಿಮೆಯ ವೇಳೆಯ ನಂತರ ವಿರಾಮ ವೇಳೆಯಲ್ಲಿ ಮನೋರಂಜನೆಗೋಸ್ಕರ ಇತರೆ ಆಟಗಳನ್ನೇ ಆಡುವುದು ಸಹಜವಾಗಿ ಕಂಡು ಬರುತ್ತದೆ. ಆಟದ ಮೂಲಕವೋ ಅಥವಾ ಹಾಡಿ ಕುಣಿಯುವುದರ ಮೂಲಕವೋ ಗುಂಪು ಕಟ್ಟಿಕೊಂಡು ಆಡುವ ಪದ್ಧತಿ ಹಿಂದಿನ ಕಾಲದಿಂದಲೂ ಇದೆ. ಕೆಲವೊಂದು ಸಮಯದಲ್ಲಿ ಮನೋರಂಜನೆಗೆ ಆಡುವುದನ್ನು ನಾವು ನೋಡಬಹುದು. ಪಾಂಡವರು ಚದುರಂಗವನ್ನು ಜೂಜು ಆಡಿ ದ್ರೌಪದಿಯ ಸೀರೆ ಸೆರಗನ್ನು ಎಳೆಯುವುದನ್ನು ಮಹಾಭಾರತದಲ್ಲಿ ಕಾಣಬಹುದು.

ಜಾನಪದರು ವಿರಾಮ ವೇಳೆಯಲ್ಲಿ ಅಥವಾ ಹಬ್ಬ ಹರಿದಿನ ಮತ್ತು ಉತ್ಸವಗಳಲ್ಲಿ ಜೊತೆಗೆ ಮಹಿಳೆಯರು ಕಾಲಕಳೆಯಲಿಕ್ಕೆ ಅಳ್‌ಮಣಿ ಆಟ, ಕವಡೆ, ಕೋಲಾಟ, ಇತ್ಯಾದಿ ಆಟಗಳನ್ನು ಆಥುತ್ತಿರುತ್ತಾರೆ. ಮನೋರಂಜನಾ ಆಟಗಳನ್ನು ವಿಂಗಡಿಸಬಹುದು.

೧. ಮಕ್ಕಳಾಟಿಕೆಗಳ - ಉಪಕರಣಗಳು.
೨. ಹೆಣ್ಣು ಮಕ್ಕಳಾಟದ ಉಪಕರಣಗಳು
೩. ಸಂಗೀತಕ್ಕೆ ಸಂಬಂಧಿಸಿದ ಉಪಕರಣಗಳು
೪. ಪ್ರದರ್ಶನಕ್ಕೆ ಸಂಬಂಧಿಸಿದ ಉಪಕರಣಗಳು
೫. ಇತರೆ ಉಪಕರಣಗಳು

ಹೀಗೆ ಹಂತಹಂತವಾಗಿ ಮನೋರಂಜನೆಗಳನ್ನೇ ವರ್ಗೀಕರಿಸಬಹುದು,. ಆಯಾ ವಯಸ್ಸಿಗೆ ತಕ್ಕಂತೆ ಆಟಗಳು ಪ್ರಾರಂಭವಾಗುತ್ತವೆ ಎಂಬುದನ್ನು ನಾವು ಕಾಣಬಹುದು. ಈಗ ಒಂದೊಂದರ ಪರಿಚಯ ಮುಂದೆ ವಿವರಿಸಿದೆ.

೧. ಮಕ್ಕಳಾಟಿಕೆಗಳು :

ಮಗು ಅಳುವಾಗ ಆ ಮಗುವಿನ ಕೈಯಲ್ಲಿ ಏನಾದರೂ ಒಂದು ವಸ್ತುವನ್ನು ಕೊಟ್ಟರೆ ಅದು ಸುಮ್ಮನಾಗುತ್ತದೆ. ಅಂತಹ ವಸ್ತುಗಳನ್ನು ಬಡಗಿಯರೇ ತಯಾರು ಮಾಡುತ್ತಾರೆ. ಇವು ಮಗುವಿನ ಬೆಳವಣಿಗೆಗೆ ಕಾರಣವಾಗುತ್ತದೆ ಇದು ಅವಶ್ಯವೂ ಕೂಡ.

★ ಗೊಂಬೆಗಳು.
★ ಗಾಲಿಗಳು.
★ ಗಿಲಕಿ.
★ ಚಿನ್ನಿಕೋಲು.
★ ಬುಗುರಿ.
★ ಬಂಡಿಗಳು.

ಹೀಗೆ ಅನೇಕ ರೀತಿಯ ಉಪಕರಣಗಳು ಮಕ್ಕಳು ಆಟ ಆಡುವುದಕ್ಕೆ ಉಪಯೋಗಿಸುತ್ತಾರೆ. ಗೊಂಬೆಗಳು ಸಣ್ಣ ಮಗು ಅಳುತ್ತಿದ್ದಾಗ ಅದನ್ನೇ ಕೊಟ್ಟರೂ ಅಳುವನ್ನೇ ಮರೆಯುತ್ತದೆ. ಇನ್ನು ಮಗು ಬೆಳೆದಂತೆಲ್ಲಾ ಗಾಲಿಗಳನ್ನು ಉರುಳಿಸಲಿಕ್ಕೆ ಬೇಕಾಗುತ್ತದೆ. ಗಿಲಕಿ ಘಲ್ ಘಲ್ ಎಂದು ಶಬ್ದ ಮಾಡುವ ಈ ಉಪಕರಣ ಸಿಟ್ಟು ಸೆಡುವು ಅಳುವನ್ನು ನಿಲ್ಲಿಸುತ್ತದೆ. ಮತ್ತೆ ಚಿನ್ನಿದಾಂಡು ಇದ್ದರೆ ಮಗುವಿಗೆ ಊಟ ಪಾಠಗಳೇ ಬೇಡವಾಗುತ್ತಿದ್ದವು. ಚಿನ್ನಿಕೋಲು ಅಥವಾ ಚಿನ್ನಿದಾಂಡು ಎಂಬ ಆಟ ಪ್ರಚಲಿತದಲ್ಲಿತ್ತು. ಚಿನ್ನಿ ಎಂದರೆ ಒಂದು ಗೇಣಿಗಿಂತ ಕಡಿಮೆ ಇರುವ ಕಟ್ಟಿಗೆಯನ್ನು ಎರಡು ಕಡೆ ಚೂಪಾಗಿ ಕೆತ್ತಿರುತದ್ತಾರೆ. ಕೋಲು ಅಥವಾ ದಾಂಡು ಒಂದು ಮೊಳ ಅಳತೆ ಇರುತ್ತದೆ. ಅದನ್ನು ಒಂದು ಕಡೆ ಚೂಪಾಗಿ ಕೆತ್ತಿರುತ್ತಾರೆ. ಅವೆರಡೂ ಸೇರಿ ಆಟ ಆಡುವ ಪದ್ದತಿಗೆ ಚಿನ್ನಿಕೋಲಾಟ ಅಥವಾ ಚಿನ್ನಿ ದಾಂಡದಾಟ ಎಂದು ಕರೆಯುತ್ತಾರೆ.

ಈ ಚಿನ್ನಿ ಕೋಲನ್ನು ಮಾಡಿಕೊಡುವುದು ಬಡಗಿಯರೇ. ಹುಡುಗರು ಒಂದು ಜೊತೆ ಚಿನ್ನಿ ದಾಂಡು ಮಾಡಿಸಿಕೊಂಡು ನಾಲ್ಕಾಣೆ ಕೊಟ್ಟಿರುವುದು ನನಗಿನ್ನು ನೆನಪಿದೆ. ಎಷ್ಟೋ ಸಾರಿ ನಾನು ಆಟದಲ್ಲಿ ಭಾಗಿಯಾದಾಗ ಪುಕ್ಕಟೆಯಾಗಿ ಮಾಡಿಕೊಟ್ಟಿದ್ದೇನೆ. ಆದರೆ ಜನಪದರು ಇದನ್ನೇ ಇಂದು ಮರೆತಿರುವ ಹಾಗಿದೆ. ದೇಶೀಯ ಆಟಗಳ ಕಡೆ ಗಮನವನ್ನು ಇಂದು ಮರೆತ್ತಿದ್ದಾರೆ. ಈಗ ಆಟ ಆಡೋಣ ಬಾ ಎಂದರೆ ಬರುತ್ತಾಯೇ ? ಕಂಪ್ಯೂಟರ್‌ನಲ್ಲಿಯೇ ಎಲ್ಲಾ ಗೇಮ್ಸ್‌ಗಳನ್ನು ಆಡುವಾಗ ಇದ್ಯಾವ ಲೆಕ್ಕ ಒಂದು ವೇಳೆ ಆಡಿದರೆ ನಗೆ ಪಾಟಲಿಗೆ ಹಿಡಾಗುವುದು ಸಹಜ.

ಬುಗರಿ ಬಗರೆ ಬಗರಿ ಎಂದುಕರೆಯುವುದುಂಟು. ಇದು ಕಟ್ಟಿಗೆಯಿಂದ ತಯಾರಿಸಿದ ವಸ್ತು ಮಕ್ಕಳು ಈ ಆಟ ಆಡುವುದಕ್ಕೆ ಉತ್ಸುಕರಾಗಿರುತ್ತಾರೆ. ಮನೆಯ ಅಪ್ಪನ ಹತ್ತಿರ ರೊಕ್ಕ ಇಸಗೊಂಡು ಬಡಗಿಯರ ಮನೆಗೆ ಬಂದು ಕೊಳ್ಳುತ್ತಾರೆ. ನಂತರ ನಾರಿನಿಂದ ಹೊಸೆದ ಚಾಟಿಯನ್ನು ಮಾಡಿಕೊಂಡು ಬಗರಿ ಆಡಿಸುವುದು ಮನೋರಂಜನೆಯೂ ಆಗಿರುತ್ತದೆ. ಬುಗರಿ ಬುಗರಿ ಬಣ್ಣದ ಬುಗರಿ ಎಂದು ಹಡಾತ್ತಾ ಸಂತೋಷಪಡುತ್ತಾರೆ.

ಬಂಡಿಗಳು ಕೂಡ ಮಕ್ಕಳ ಆಟಕ್ಕೆ ಬರುವಂತವುಗಳು ಗಾಲಿಯಿಂದ ತಯಾರಿಸಿದ ಬಂಡಿಯನ್ನು ಒಬ್ಬರು ಎಳೆಯುತ್ತಾರೆ. ಮತ್ತೊಬ್ಬರು ಈ ಬಂಡಿಯಲ್ಲಿ ಕುಳಿತು ಕೊಳ್ಳುತ್ತಾರೆ. ಎರಡು ಕಡೆ ಗಾಲಿಗಳಿಂದ ಕೂಡಿರುತ್ತಿದೆ. ಮತ್ತು ಮೂರು ಗಾಲಿ ಬಂಡಿಗಳನ್ನೇ ನಾವು ನೋಡಬಹುದು. ಕಾಲು ಬರುವ ಮಕ್ಕಳಿಗೆ ಬಂಡಿಯನ್ನೇ ಉಪಯೊಗಿಸಿದರೆ ಬೇಗನೇ ಕಾಲುಗಳು ಬರುತ್ತವೆ ಎಂದು ಹೇಳುತ್ತಾರೆ.

**ಹೆಣ್ಣು ಮಕ್ಕಳಾಟ :**

ಅಳ್‌ಮಣಿಯಾಟ : ಮಹಿಳೆಯರು ತಮ್ಮ ಮನೆಗೆಲಸ ಮುಗಿದ ಮೇಲೆ ವಿರಾಮದ ವೇಳೆಯಲ್ಲಿ ಅಲ್‌ಮಣಿ ಆಟ ಅಥವಾ ಚನ್ನೆಮಣೆ ಆಟ ಆಡುತ್ತಾರೆ. ಒಂದು ಮರದ ಮಣೆಯ ಮೇಲೆ ಗೀರು ಹಾಕಿಕೊಂಡು ಅಥವಾ ಆಗಲೇ ಸಿದ್ಧವಾದ ಕುಣಿಯಂತಿರುವಂತೆ ಮಾಡಿರುವುದರಿಂದ ಅಳ್ಳುಗಳನ್ನೇ ತೆಗೆದುಕೊಂಡು ಆಡುತ್ತಾರೆ.

**ಕೋಲಾಟ :**

ಸುಗ್ಗಿಯ ಸಮಯದಲ್ಲಿ ರೈತರು ತಮ್ಮ ಸಂತೋಷಕ್ಕೆ ಹಾಡುಗಳ ಮೂಲಕ ಮರದ ವಸ್ತುಗಳಿಂದ ಆಟವಾಡುವ ಪದ್ಧತಿ ಪ್ರಾಚೀನ ಕಾಲದಿಂದಲೂ ಬಂದಿದೆ. ಜಾನಪದರು ಎಂಟತ್ತು ಜನರು ಸೇರಿ ಕೈಯಲ್ಲಿ ಎರಡು, ಒಂದೋ ಕೋಲನ್ನು ಹಿಡಿದುಕೊಂಡು ಹಾಡು ಹೇಳುತ್ತಾ ಕುಣಿಯುತ್ತಾರೆ. ಎಲ್ಲರ ಕೈಯಲ್ಲಿನ ಕೋಲನ್ನು ಇನ್ನೊಬ್ಬರ ಕೋಲಿಗೆ ಬಡಿಯುತ್ತಾ ಸುತ್ತಲೂ ತಿರಗುತ್ತಾ ' ಕೋಲು ಕೋಲೆನ್ನ ಕೋಲೆ 'ಎಂದು ಹಾಡುತ್ತಿರುತ್ತಾರೆ. ಇದನ್ನು ಗೌರಿ ಹುಣ್ಣಿಮೆಯ ದಿನ ಹಬ್ಬ ಹರಿದಿನಗಳಲ್ಲಿ ಜನಪದರು ಇಂದಿಗೂ ರೂಢಿಸಿಕೊಂಡು ಬಂದಿರುವುದು ನಮಗೆ ಗೊತ್ತು. ಕೋಲಾಟವನ್ನು ಮಹಿಳೆಯಲ್ಲದೇ, ಪುರುಷರು ಆಟವನ್ನು ಹಾಡುತ್ತಾ ಕುಣಿಯುತ್ತಾ ಕೋಲಾಟ ಆಡುವ ಸನ್ನಿವೇಶವನ್ನು ನಾವು ಹಂಪೆ ಉತ್ಸವ, ಸಾಂಸ್ಕೃತಿಕ ಸಂದರ್ಭಗಳಲ್ಲಿ ನೋಡಬಹುದು. ಈ ರೀತಿಯಾಗಿ ಇನ್ನು ಅನೇಕ ರೀತಿಯ ಆಟಗಳನ್ನು ಜನಪದರು ರೂಢಿಸಿಕೊಂಡು ಬಂದಿರುವುದು ಸ್ವಾಗತಾರ್ಹವಾದರೂ ಅವು ವಿನಾಶದ ಹಂಚಿನಲ್ಲಿ ಸರಿದಿವೆ ಎಂಬುದನ್ನು ನಾವು ಕಾಣಬಹುದು.

ಇನ್ನಿತರ ಉಪಕರಣಗಳಾದ ಬ್ಯಾಟ್, ವಿಕೇಟ್, ಬೇಸ್ ಬ್ಯಾಟ್, ಇತ್ಯಾದಿಗಳು ಕಂಪನಿಗಳಿಂದ ಬಂದರೂ ಹಳ್ಳಿಹಳ್ಳಿಗಳಲ್ಲಿ ಇವುಗಳನ್ನು ಬಡಗಿಯರ ಹತ್ತಿರ ತಯಾರಿಸಿಕೊಳ್ಳುತ್ತಾರೆ.

ಆಧುನಿಕ ಪ್ರಭಾವದ ಗಾಳಿ ಬೀಸಿದಾಗ ಬೇರೆ ಬೇರೆ ದೇಶದಿಂದ ಬಂದ ಆಟಗಳು ಇಂದು ದೇಶೀಯ ಆಟಗಳನ್ನು ಮೂಲೆ ಗುಂಪನ್ನಾಗಿಸಿವೆ. ದೇಶೀಯ ಆಟಗಳನ್ನು ಮೀರಿನಿಂತ ಕ್ರಿಕೆಟ್, ಟೆನ್ನಿಸ್, ಪುಟ್‌ಬಾಲ್, ಪ್ರಿಯರಾಗಿ ಜನಪದರು ಆಡುವ ಆಟಗಳು ತಮ್ಮ ಅಸ್ಥಿತ್ವವನ್ನು ಕಳೆದುಕೊಂಡಿವೆಯಾದರೂ ಅವು ಮಾಯವಾಗಿಲ್ಲ.

**ಸಂಗೀತಕ್ಕೆ ಸಂಬಂಧಿಸಿದ ಉಪಕರಣಗಳು :**

ಸಂಗೀತಕ್ಕೆ ಸಂಬಂಧಿಸಿದ ಉಪಕರಣಗಳನ್ನು ಈ ಬಡಗಿಯರೇ ತಯಾರಿಸುತ್ತಾರೆ. ಸಂಗೀತಕ್ಕೆ ತಲೆಬಾಗದಿರುವ ಮನುಷ್ಯನೇ ಇಲ್ಲ. ಸಂಗೀತವು ಮನಸ್ಸನ್ನು ಮುದಗೊಳಿಸುತ್ತದೆ. ಶಾಂತಿಯನ್ನೇ ಕೊಡುತ್ತವೆ,. ಸಂಗೀತದಿಂದ ನಮ್ಮನ್ನೇ ನಾವು ಮರೆಯುವ ಸಂಭವವೂ ಕೂಡ ಇವೆ. ಅನೇಕ ರೀತಿಯ ಸಂಗೀತಕ್ಕೆ ಸಂಬಂಧಿಸಿದ ಉಪಕರಣಗಳನ್ನು ಕಾಣಬಹುದು. ಅವುಗಳು ಇಂತಿವೆ.

★ ಹಾರ್ಮೋನಿಯಂ.

★ ತಬಲ.

★ ಡೊಳ್ಳು.

★ ಮದ್ದಲೆ.

★ ತಂಬೂರಿ.

★ ಮೃದಂಗ.

★ ಶಹನಾಯಿ.

★ ಕೊಳಲು.

★ ಸಮಾಳ.

ಹೀಗೆ ಹತ್ತು ಹಲವಾರು ಸಂಗೀತದ ಉಪಕರಣಗಳ ಜೊತೆಗೆ ಭಜನೆಗೆ ಬಳಸುವ ಕೆಲವೊಂದು ಉಪಕರಣಗಳನ್ನೇ ನಾವು ಕಾಣಬಹುದು. ಆದರೆ ಈಗ ಆದುನಿಕ ಕಾಲವಾದ್ದರಿಂದ ಇವುಗಳ ಯಂತ್ರ ನಿರ್ಮಿತವಾದವುಗಳಾದರೂ ಕೂಡ ಇವುಗಳನ್ನು ಬಿಟ್ಟು ಸಂಗೀತ ಇರಲಾರದು, ಇಂಪಾಗಿರಲಾರದು.

**ಪ್ರದರ್ಶನಗಳಿಗೆ ಸಂಬಂಧಿಸಿದ ಉಪಕರಣಗಳು :**

ಸಾಂಸ್ಕೃತಿಕವಾಗಿ ನೋಡಿದರೆ ಈ ನಾಡು ಭವ್ಯ ಪರಂಪರೆಯನ್ನು ಹೊಂದಿದೆ. ಅಂತಹ ಪರಂಪರೆಯಲ್ಲಿ ಪ್ರದರ್ಶನಾ ಕಲೆಗಳು ಕಂಡು ಬರುತ್ತವೆ. ಆ ಪ್ರದರ್ಶನ ಕಲೆಗಳು ಪ್ರದರ್ಶನವಾಗಬೇಕಾದರೆ ಅವುಗಳಿಗೆ ತನ್ನದೇ ಆದ ಉಪಕರಣ ಅಥವಾ ಆಭರಣಗಳು ಅವಶ್ಯಕ. ಅವುಗಳನ್ನು ಈ ಬಡಗಿಯರು ತಯಾರಿಸುತ್ತಾರೆ. ಇಂತಹ ಪ್ರದರ್ಶನ ಕಲೆಗಳ ಉಪಕರಣಗಳು ಈ ಕೆಳಗಿನಂತಿವೆ.

★ ಸಿಂಹಾಸನಗಳು.

★ ಕಿರೀಟಗಳು.

★ ಭುಜ ಕೀರ್ತಿಗಳು.

★ ಎದೆ ಹಾರ.

★ ಗದೆ.

★ ಬಿಲ್ಲು ಬಾಣ.

★ ಚಕ್ರ.

★ ತಂಬೂರಿ (ನಾರದನ ಕೈಯಲ್ಲಿರುವ).

ಇತ್ಯಾದಿ ಉಪಕರಣಗಳಿದ್ದರೆ ಈ ಕಲೆ ಅಥವಾ ಬಯಲಾಟ, ಯಕ್ಷಗಾನಗಳಂತವುಗಳಿಗೆ ಮೆರಗು ತರುತ್ತವೆ,.

**ಇತರೆ ಉಪಕರಣಗಳು :**

ಮದುವೆಗಳಲ್ಲಿ ಬಾಸಿಂಗವನ್ನು ತಯಾರಿಸುವುದು ದೇವರ ದ್ಯಾನ ಮಾಡಲು ಭಜನೆ ಸಾಮಾಗ್ರಿಗಳು, ತಾಯತ, ಇತ್ಯಾದಿ ಉಪಕರಣಗಳನ್ನು ತಯಾರಿಸುವುದೂ ಬಡಗಿಯರು ಸಿದ್ಧ ಹಸ್ತರು.

ಈ ಎಲ್ಲಾ ಉಪಕರಣಗಳನ್ನು ಪರಂಪರೆಯ ದೃಷ್ಟಿಯಿಂದ ನೋಡಿದರೆ ಅವುಗಳನ್ನು ನಿರ್ಧಿಷ್ಠವಾದ ಹುಟ್ಟುವಿನಸುಳಿವು ಸಿಗುವುದು ಕಷ್ಟವಾದರೂ ಸಾಧ್ಯವಾದ ಮಟ್ಟಿಗೆ ಜಾನಪದರು ಇವುಗಳನ್ನು ಅಂದಿನಿಂದ ಇಂದಿನವರೆಗೂ ಉಳಬಿಸಿಕೊಂಡು ಬಂದಿವೆಯಾದರೂ ಅವು ವಿನಾಶದ ಅಂಚಿನಲ್ಲಿವೆ. ಈ ಎಲ್ಲವುಗಳನ್ನು ವಿಶ್ವಕರ್ಮರಲ್ಲಿ ಒಬ್ಬರಾದ ಬಡಗಿಯರು ತಯಾರಿಸುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ. ಅಂತಹ ಪ್ರತಿಭೆ ಅವರಲ್ಲಿದೆ.

# ೪. ಕೌಟಂಬಿಕ ರಚನೆ ಮತ್ತು ಬಡಗಿತನ :

ಬಹುಕಾಲದಿಂದಲೂ ಮನುಷ್ಯನು ತನ್ನ ವ್ಯಕ್ತಿಗನುಗುಣವಾಗಿ ಜಾತಿ ವರ್ಗ ಗುಂಪು ಇವುಗಳಲ್ಲಿ ರೂಡಿಸಿಕೊಂಡು ಬಂದಿದ್ದಾನೆ. ಒಂದು ಸಮುದಾಯ ಒಂದು ವೃತ್ತಿಯನ್ನು ಮಾಡುತ್ತಾ ಬಂದರೆ ವಂಶಪರಂಪರೆಯಾಗಿ ಆ ಕಸುಬನ್ನು ಮಾಡುತ್ತಾ ಬರುತ್ತಾರೆ. ಆ ಕಸುಬಿನ ಅದಾರದ ಮೇಲೆ,ವರ್ಗ ,ಪಂಗಡ, ಪಿಂಗಡನೆಯಾದವು ಎಂಬುದು ಇತಿಹಾಸ. ಯಾವ ಸಮುದಾಯದ ಕುಟುಂಬಗಳೇ ಆಗಲಿ ತಾತಾ ಮುತ್ತಾನಿಂದಲೂ ಬೆಳೆಸಿ ಕೊಂಡಬಂದ ವೃತ್ತಿಯನ್ನು ಮುಂದುವರಸಿಕೊಂಡು ಬರುತ್ತಾರೆ ಆದರೆ ಈ ಮಾತು ಇಂದಿಗೆ ಅನ್ವಸುವುದಿಲ್ಲ ಅಪ್ಪಹಾಕಿದ ಆಲದಮರಕ್ಕೆ ನೇಣು ಹಾಕ್ಕಿಕೊಳ್ಳಬಾರದು ಎಂಬ ಗಾದೆ ಇಂದು ವಾಸ್ತವಸ್ಥಿತಿಗೆ ಬಂದಿದೆ ಆಗಂತ ಅವರು ವೃತ್ತಿಗಳ ಬೆಳೆದಿಲ್ಲ ಎಂತಲ್ಲ ಒಂದಲ್ಲ ಒಂದು ರೀತಿಯಲ್ಲಿ ಒಬ್ಬರಲ್ಲಿ ಇನ್ನೊಬ್ಬರಿಂದ ಈ ದೇಶಿಯ ತಂತ್ರ ಜ್ಞಾನಗಳು ಉಳಿಸಿಕೊಂಡು ಬಂದಿದೆ ಈ ದೇಶದ ತತ್ರಜ್ಞಾನಗಳು ಮತ್ತು ಜಾನಪದ ನಸಿಶಿ ಹೋಗುವ ಮೊದಲೇ ಇವುಗಳನ್ನು ಅದ್ಯಾಯಕ್ಕೆ ಒಳಪಡಿಸಬೇಕು.

ಅಂತಹ ಒಂದು ತಂತ್ರಜ್ಞಾನ ಈ ಬಡಗಿತನ ಈ ಬಡಗಿಸಮುದಾಯದ ಕೌಟುಂಬಿಕ ರಚೆನೆಯ ಪಾತ್ರ ಏನು? ಎಂಬ ಪ್ರಶ್ನೆಗೆ ಉತ್ತರಿಸಬೇಕಾಗಿದೆ. ಸಾಮಾನ್ಯವಾಗಿ ಯಾವ ಒಂದು ವೃತ್ತಿಯನ್ನು ಮಾಡುತ್ತಾರೋ ಆ ಒಂದು ಕೆಲಸವನ್ನು ಮಾಡುವಂತ ಮನೆತನದಲ್ಲಿ ಅದು ಹುಟ್ಟಿನಿಂದಲೇ ಅಂಟಿಕೊಂಡು ಬಂದಿರುತ್ತದೆ ಹಿರಿಯ ಕೆಲಸ ಮಾಡುವ ಸಂದರ್ಭದಲ್ಲಿ ಮಕ್ಕಳು ಮೊಮ್ಮಕ್ಕಳಿಗೆ ಪ್ರತ್ಯೇಕವಾಗಿ ಕಲಿಸುವಂತ ಪರಂಪರೆ ಏನೂ ಇರುವುದಿಲ್ಲ ವೃತ್ತಿಗೂ ಮತ್ತು ಮಕ್ಕಳಿಗೂ ಅನ್ಯೋನ್ಯ ಸಂಬಂದ ಬೆಳೆದು ಬಂದಿರುತ್ತದೆ

ಕೈಗೂ ಮತ್ತು ಬಾಯಿಗೂ ಇರುವಂತಹ ಸಂಬಂಧ ಹೇಗೋ ಹಾಗೆ ಮಗು ಮತ್ತು ವೃತಿ ಸಂಬಂಧನೂ ಕೂಡ ಹಾಗೆ ಪ್ರತಿಯೊಂದು ವೃತ್ತಿಯನ್ನು ನೋಡಿದರೂ ಮಕ್ಕಳಿಗೆ ಪ್ರತ್ಯೇಕವಾಗಿ ಕಲಿಸುವ ಅಗತ್ಯಬೀಳದು, ಹಾಗಾದರೆ ಹೇಗೆ ಕಲಿಯುತ್ತಾರೆ ಎಂಬ ಪ್ರಶ್ನೆ ಎದುರಿಗೆ ಬರುತ್ತದೆ ಆ ಸಮುದಾಯದ ಕುಟುಂಬದ ಪರಿಸರದ ಮೇಲೆ ಅವಲಂಬಿತ ವಾಗಿರುತ್ತದೆ ತಂದೆಯ ಜೊತೆ ಮಗು ಇದ್ದೇ ಇರುತ್ತೆ. ಆ ಮಗು ಸಮಾಜದಲ್ಲಿ ಹೆಚ್ಚು ಒಡನಾಟ ವಿರುವವುದನ್ನು ಅನುಕರಣೆ ಮಾಡುತ್ತಾ ಈ ಅನುಕರಣೆ ಮಗುವಿನ ಮೇಲೆ ಹೆಚ್ಚು ಪ್ರಭಾವ ಬೀರುತ್ತದೆ

ತಂದೆ ಮತ್ತು ಹಿರಿಯರು ಕೆಲಸ ಮಾಡುವಂತ ಸಂದರ್ಭದಲ್ಲಿ ಆ ಮಗು ಅಲ್ಲಿ ಇರುತ್ತದೆ ಆಗ ಅವರು ಮಗು ಸಾಮಾನುಗಳನ್ನು ಗುರ್ತುಹಿಡಿಯಲಿಕ್ಕೆ ಅಗಲುಂಬಳಿಕೊಡು ಬೈರಗಿ ಕೊಡು, ಮಟ್ಲೇಗಿ ಕೊಡು ಅನ್ನುವುದರ ಮೂಲಕ ತಾವು ಉಪಯೋಗಿಸುವ ಉಪಕರಣಗಳ ಪರಿಚಯ ಮಾಡಿಕೊಡುತ್ತಾರೆ ತಂದೆ ಮಾಡುವುದನ್ನು ಮಗ ಅನುಕರಣೆ ಮಾಡಲು ಹೋಗುತ್ತದೆ ತಂದೆ ಬಯ್ಯುತ್ತಾನೆ 'ಲೇ ಅದು ಮುಟ್ಟಬ್ಯಾಡ ಆಯಿಯಾಗುತ್ತೆ' ಎಂದು ಹೆದರಿಸಿದರೂ ಮಗುವಿನ ಹಟದ ಮುಂದೆ ಹಿರಿಯರು ಸೋಲುತ್ತಾರೆ ಅದಕ್ಕೆ ಆ ಮಕ್ಕಳಿಗೆ ಸಣ್ಣ ಕೊಡ್ತಿ, ಸಣ್ಣ ಉಳಿಯನ್ನು ಪ್ರತ್ಯೇಕವಾಗಿ ಮಾಡಿಕೊಟ್ಟು ಸುಮ್ಮನೆ ಇರಿಸುವ ಜವಾಬ್ದಾರಿ ಇದ್ದರೂ ಅದು ಮುಂದೆ ವೃತ್ತಿ ಕಲಿಕೆಗೆ ಭದ್ರ ಬುನಾದಿಯಾಗುತ್ತದೆ. ಹೀಗೆ ಪರಿಸರದ ಪ್ರಭಾವ ದಿಂದಾಗಿ ಬಡಗಿ ಅಷ್ಟೆ ಅಲ್ಲ ಎಲ್ಲಾ ವೃತ್ತಿಗೆ ಸಂಬಂದಪಟ್ಟಿರುತ್ತದೆ.

ಕುಂಬಾರಿಕೆ ಮಾಡುವ ಮನೆಯಲ್ಲಯೂ ಅಷ್ಟೆ ಗಡಿಗಿ ಕೇಲು ಹೂಜಿ ತಯಾರಿಸುವ ಹಂತದಲ್ಲಿ ಮಗು ಕೆಸರನ್ನು ಹೇಗೆ ಕಲಸುವುದು ಎಷ್ಟು ನೀರುಹಾಕುವುದು, ತಿಗರಿ ತಿರುಗಿಸುವುದು ಮಣ್ಣಿನ ಹದ ಇತ್ಯಾದಿ ಎಲ್ಲಾ ಕೆಲಸಗಳನ್ನು ಆ ಮಗು ನೋಡುತ್ತಲೇ ಇರುತ್ತದೆ.

ಕಮ್ಮಾರಿಕೆ ಕೆಲಸಮಾಡುವ ಸಮುದಾಯದಲ್ಲಿ ಮಗು ಇಕ್ಕಳವನ್ನು ಹೇಗೆ ಹಿಡಿಯಬೇಕು ಚಾಣವನ್ನು ಹೇಗೆ ಹಿಡಿಯಬೇಕು ಯಾವ ಉಪಕರಣಗಳಿಗೆ ಎಷ್ಟು ನೀರುಣಿಸಬೇಕು. ಇವೆಲ್ಲವುಗಳನ್ನು ಆ ವೃತ್ತಿ ಸಂಬಂದ ಪಟ್ಟವರು ಅದನ್ನು ವಂಶ ಪರಂಪರೆಯಿಂದ ಬರುವಂತದ್ದು ಎಂಬ ಬಾವನೆ ನನ್ನದು. ಏಕೆಂದರೆ ನನ್ನ ತಂದೆ ಒಂದುದಿನವೂ ಬಡಗಿತನದ ಕೆಲಸವನ್ನೆ ಹೀಗೆ ಮಾಡು ಎಂದು ಕಲಿಸಿಕೊಟ್ಟಿಲ್ಲ ಅವರು ಮಾಡುವಾಗ ಸುಮ್ಮನೆ ಕೂಡುತ್ತಿರಲಿಲ್ಲ. ಅವರು ಕೆಲಸ ಮಾಡುವಾಗ ಅವರ ಜೊತೆ ಭಾಗಿಯಾಗಿದ್ದೇನೆ ಏನಾದರು ತಪ್ಪು ಮಾಡಿದರೆ ದನ ಕಾಯಕ ಹೋಗಲೇ ಎಂದು ಬಯ್ಯುತ್ತಿದ್ದ ರು. ಅಲ್ಲಿದ್ದವರು ಅಷ್ಟು ಮಾಡೋದು ದೊಡ್ಡದು ಆ ಹುಡುಗ ಅದನ್ನು ಮೆಲ್ಲಗೆ ಹೇಳು ಎದಿದ್ದ ನೆನಪುಗಳು ಅಚ್ಚಳಿಯದೇ ಉಳಿದಿವೆ ಈಗ ನಾನು ಸ್ವತಂತ್ರವಾಗಿ ಕೆಲಸ ಮಾಡುವ ಸಾಮರ್ಥ್ಯ ವಿದ್ದರೂ ನಮ್ಮ ಅಜ್ಜ, ತಂದೆ ಮಾಡುವ ಚಾಕುಚಕ್ಕತೆ ನನ್ನಲಿಲ್ಲ. ಏನೇ ಆದರು ಓಂದಿನವವರು ಮಾಡುವ ಕೆಲಸಕ್ಕೆ ಇಂದಿನವರು ಮಾಡುವ ಕೆಲಸಕ್ಕು ಅಜಗಜಾಂತರ ವ್ಯತ್ಯಾಸ ಹೇಗೆಂದರೆ ಓಂದೆ ಯಾವ ಮಿಷನ್‌ಗಳು ಇಲ್ಲದಂತ ಸಂದರ್ಭದಲ್ಲಿ ತಮ್ಮ ಕೈ ಚಳಕದಿಂದಲೇ ಕೆಲಸ ಮಾಡುವಂತವುಗಳು ಇಂದು ಜೀವಂತ ವಾಗಿರುವುದನ್ನು ನೋಡಿದರೆ ಇಂದಿನವರು ಎಷ್ಟೆ ಆಧುನಿಕರಣಗೊಂಡರೂ ಅವರಿಗೆ ಸರಿಸಮಾನರಲ್ಲ ಎಂದು ಮಾಗಳದ ವೀರಾಚಾರಿ ಹೇಳುತ್ತಾರೆ.

ಬಡಗಿತನ ಮಾಡುವ ಮನೆಯಲ್ಲಿ ಇರುವ ಮಕ್ಕಳಿಗೂ ಮತ್ತು ಪ್ರತಿಯೊಬ್ಬರಿಗೂ ಒಂದು ಕಲ್ಪನೆ ಶಕ್ತಿ ಬೆಳೆಯುತ್ತದೆ. ಮನೆಯ ಯಜಮಾನ ಕೆಲಸ ಮಾಡಲಿಕ್ಕೆ ಒಂದು ಉಪಕರಣ ಮಾಡಬೇಕು ಎಂದು

ಕಟ್ಟಿಗೆಯನ್ನು ತಂದರೆ ಆ ಮನೆಯಲ್ಲಿ ಮಕ್ಕಳು ಸಮ್ಮಪ್ಪ ಏತಕ್ಕೆ ತಂದಿರಬಹುದು ಇದರಲ್ಲಿ ಯಾವ ಉಪಕರಣ ಮಾಡಬಹುದು ಎಂಬ ಚಿಂತನೆಯನ್ನು ಮಾಡಿ ಇದು ಕುರ್ಚಿ ಮಾಡಲಿಕ್ಕೆ ಇದು ಕುಂಟಿ ಮಾಡಲಿಕ್ಕೆ ಇತ್ಯಾದಿ ಉಪಕರಣ ತಯಾರಿಸಲು ತಂದಿದ್ದಾರೆಂದು ತೀರ್ಮಾನ ಮಾಡುತ್ತಾರೆ. ಆದರ ಉದ್ದ ಅಗಲ ಅಳತೆಯನ್ನು ನೋಡಿ ಅವರು ಅಲೋಚನೆ ಮಾಡಿ ಇದು ಇಂತಹ ಕೆಲಸಕ್ಕೆ ಹೇಳಿ ಬಿಡುತ್ತಾರೆ. ಇದನ್ನು ಯಾರು ಕಲಿಸಿಕೊಡಬೇಕಿಲ್ಲ ಏಕೆಂದರೆ ಅದು ಪರಿಸರದ ಪ್ರಭಾವ ಹೀಗೆ ದಿನ ಬೆಳಕಾದರೆ ಸಾಕು ಅದನ್ನೇ ಜೀವನ ವೃತ್ತಿಯಾಗಿ ಮಾಡಿಕೊಂಡು ಒಂದು ಸಮುದಾಯದ ಮಕ್ಕಳಿಗೆ ಪ್ರತ್ಯೇಖವಾಗಿ ತರಬೇತಿ ಕೊಡುವುದಿಲ್ಲ ರೂಡಿಯಿಂದ ಬರುವಂತ ವೃತ್ತಿಯಿಂದಲೂ ಬರುತ್ತದೆ.

ಇಂದು ಪರಿಶ್ರಮದ ಅಭಾವ ವಿರುವುದರಿಂದ ಈ ಕಲೆಗಳು ನಸಿಶಿ ಹೋಗುವ ಮಾರ್ಗದಲ್ಲಿವೆ ಈಗ ತರಬೇತಿಯನ್ನು ಸಂಘಸಂಸ್ಥೆಗಳು ಮತ್ತು ಸರ್ಕಾರಗಳು ಕೈಗಾರಿಕಾ ತರಬೇತಿ ಕೇಂದ್ರದ ಮೂಲಕ ದೇಶಿಯ ತಂತ್ರ ಜ್ಞಾನಗಳಿಗೆ ತರಬೇತಿ ಕೊಡುತ್ತಿವೆ ತರಬೇತಿ ಸಂದರ್ಭದಲ್ಲಿ ಕಲಿಯುವರಿಗೆ ಸಹಾಯಧನವನ್ನು ಕೊಡಲಾಗುತ್ತದೆ ಇದು ರಕ್ತಗತವಾಗಿರುವುದಕ್ಕಿಂತ ಉತ್ತಮ ತರಬೇತಿ ಇಲ್ಲವಾದರೂ ಆ ಹೊಣೆಯನ್ನು ಹೊತ್ತುಕೊಂಡು ಹೋಗುವ ಜವಾಬ್ದಾರಿ ಸಂಘ ಸಂಸ್ಥೆ ಸರ್ಕಾರಗಳು ಮಾಡುತ್ತಿವೆ.

ಹೀಗೆ ಅಜ್ಜ, ಅಪ್ಪ, ಮಗ ವಂಶಪರಂಪರೆಯಾಗಿ ತಮ್ಮ ವೃತಿಯನ್ನು ಮಾಡಿಕೊಂಡು ಬಂದಿದ್ದಾರೆ ಇಲ್ಲಿ ಮುಖ್ಯವಾಗಿ ತಿಳಿಸಬೇಕಾದ ವಿಚಾರವೆಂದರೆ ಅಜ್ಜ ಮಾಡಿದ ವೃತ್ತಿಯನ್ನು ಅಪ್ಪ ಮಾಡಲೇ ಬೇಕೆಂದಿಲ್ಲ. ತಂದೆ ಮಾಡಬೇಕಾದ ವೃತ್ತಿಯನ್ನು ಮಗ ಮಾಡಲೇ ಬೇಕೆಂದಿಲ್ಲ ಒಬ್ಬರು ಕಮ್ಮಾರಿಕೆ ಮಾಡಿದರೆ ಮತ್ತೊಬ್ಬರು ಬಡಗಿತನ ಮಾಡುತ್ತಾರೆ ಹಾಗೆ ಶಿಲ್ಪಿ ಚಿತ್ರ, ಅಕ್ಕಸಾಲಿ ಹೀಗೆ ಪಾಂಚಾಳ ವೃತಿಗಳನ್ನು ಅವರು ತಮ್ಮ ಆಸಕ್ತಿ ಕ್ಷೇತ್ರಗಳಲ್ಲಿ ತೊಡಗಿಸಿಕೊಳ್ಳುತ್ತಾರೆ.

ಹೂ. ಹಡಗಲಿಯ ಹಂಸಾನಂದಚಾರಿ ಯವರು ರಥ, ಪಲ್ಲಕ್ಕಿ, ಮಂದಾಸನ ಸಾಂಸ್ಕೃತಿಕ ಮತ್ತು ಕೃಷಿ ಉಪಕರಣವನ್ನು ಮಾಡುತ್ತಾರೆ ಗೃಹೋಪಕರನವನ್ನು ಮಾಡುತ್ತಾರೆ ಇದು ಒಟ್ಟಾಗಿ ಬಡಗಿತನ ಎಂದು ಹೇಳಬಹುದು ಜೊತೆಗೆ ಕಮ್ಮಾರಿಕೆ ಶಿಲ್ಪಿ, ಅಕ್ಕಸಾಲಿಕ್ಕೆಯನ್ನು ತನ್ನ ಕೌಶಲ್ಯದಿಂದ ತಮ್ಮ ಪ್ರತಿಭೆಯನ್ನು ಬೆಳೆಸಿಕೊಂಡಿದ್ದಾರೆ ಪಂಚಾಳದವರು ಒಂದು ವೃತ್ತಿ ಯನ್ನು ಅವಲಂಬಿಸಿರುವುದಿಲ್ಲ ಕನಿಷ್ಠ ಎರಡು ವೃತ್ತಿಯನ್ನಾದರೂ ಕರಗತಮಾಡಿಕೊಂಡಿರುತ್ತಾರೆ.

ಬಡಗಿ ಸಮುದಾಯದವರು ಅವಿಭಕ್ತ ಕುಟುಂಬ ಹೆಚ್ಚಾಗಿರುತ್ತಿದ್ದವು ಆ ಮನೆಯ ಹಿರಿಯನ ಯಜಮಾನಿಕೆಯಂತೆ ಮನೆಯ ಹಾಗುಹೋಗುಗಳು ನೆಡೆಯುತ್ತಿದ್ದವು ಅವರೇ ಮಾರ್ಗದರ್ಶಕರು ಆದರೆ ಆಧುನಿಕಯುಗದ ಪರಿಣಾಮವಾಗಿ ವಿಭಕ್ತಿ ಕುಟುಂಬಗಳಾಗಿ ಮಾರ್ಪಡಾಗಿವೆ ಬಡಗಿಗಳ ಕೌಟುಂಬಿಕ ಜೀವನ ಆಚಾರ ಪೂಜೆ ಪುನಸ್ಕಾರ ಹೀಗೆ ಸಂಪ್ರದಾಯಸ್ಥ ಕುಟುಂಬಗಳಾಗಿರುತ್ತವೆ. ಇವರ ಜೀವನವೇ ಬಡಗಿತನದಲ್ಲಿ ಮುಡುಪಾಗಿಟ್ಟುಕೊಂಡವರು ಇಂದಿಗೂ ಹಳ್ಳಿಗಳಲ್ಲಿ ಜೀವಂತಕ್ಕೆ ಸಾಕ್ಷಿ.

ಈ ಹಿನ್ನೆಲೆಯಿಂದ ನೋಡಿದರೆ ಬಡಗಿ ಇಲ್ಲವೆ ಒಟ್ಟು ಪಾಂಚಾಳ ಸಮುದಾಯಗಳ ಒಟ್ಟು ಕುಟುಂಬವೇ ಉತ್ಪಾದಕ ಕೇಂದ್ರವಾಗಿ ಪರಿಣಮಿಸಿದೆ. ಕುಟುಂಬವೆ ಅತಿ ಪುಟ್ಟ ಔದ್ಯೋಗಿಕ ಘಟಕವಾಗಿ

ಸಾಮಾಜಿಕ ಅಗತ್ಯಗಳನ್ನು ಪೂರೈಸುತ್ತದೆ ಗಾಂಧೀಜಿ ಕಂಡಿದ್ದ ಗ್ರಾಮರಾಜ್ಯದ ಕನಸು ಇಂತಹ ನೆಲೆಗಳಿಂದ ಬಂದದ್ದು. ಗ್ರಾಮದ ಪ್ರತಿ ಸಮುದಾಯವೂ ಕುಟುಂಬವು ಅದರ ಎಲ್ಲ ವ್ಯಕ್ತಿಗಳು ಸ್ವಂಯಂ ಶಕ್ತಿಯನ್ನು ಪಡೆದುಕೊಳ್ಳುವ ಗುಣವನ್ನು ಇಂತಹ ಉತ್ಪಾದನಾ ಪ್ರಕ್ರಿಯೆಯಲ್ಲಿ ಕಾಣಬಹುದು.

### ೪.೧. ಬಡಗಿ ವೃತ್ತಿಯಲ್ಲಿ ಮಹಿಳೆ :

ಗ್ರಾಮೀಣ ಪ್ರದೇಶದಲ್ಲಿ ಕರಕುಶಲ ಕರ್ಮಿಗಳು ತಮಗೆ ಹಿಂದಿನಿಂದ ಅನುವಂಶಿಕವಾಗಿ ಬೆಳೆಸಿಕೊಂಡು ವೃತ್ತಿಯನ್ನು ಮಾಡಿಕೊಂಡು ಬಂದಿರುವುದು ನಮಗೆ ತಿಳಿದಿರುವ ವಿಷಯವೇ ಆಗಿದೆ. ಆ ವೃತ್ತಿಯಲ್ಲಿ ಪುರಷನ ಜೊತೆಗೆ ಮಹಿಳೆಯ ಪಾತ್ರ ಇರುವುದನ್ನು ಸಹ ನಾವು ಕಾಣಬಹುದು. ನಮ್ಮ ಹಿರಿಯರು ಹೇಳಿರುವ ಮಾತು ' ಒಬ್ಬ ಯಶಸ್ಸಿನ ಗಂಡಿನ ಹಿಂದೆ ಒಬ್ಬಮಹಿಳೆಯ ನೆರಳಿರುತ್ತದೆ ' ಎಂಬ ಮಾತನ್ನು ಇಲ್ಲಿ ನೆನೆಯಬಹುದು. ಪುರುಷನಿಗೆ ಸಮಾಜದಲ್ಲಿ ಹೆಚ್ಚಿನ ಗೌರವ ಇದೆ ಗಂಡು ಎಲ್ಲಿ ಹೇಗೆ ಏನು ಬೇಕಾದರೂ ಮಾಡಬಹುದು ಆದರೆ ಸ್ತ್ರೀಯಾದವಳು ಮನೆಯ ಹೊರಗೆ ಬರುವಂತಿಲ್ಲ, ಬಂದರೆ ಅವರ ಬಗ್ಗೆ ನಾನಾ ಉಹಾಪೋಹಗಳು ಏಳುತ್ತವೆ ಗಂಡಿನ ಸರಿಸಮಾನವಾಗಿ ಬೆಳೆದು ಬಂದಿರುವುದನ್ನು ನಾವು ಕಾಣಬಹುದು. ಪ್ರಪಂಚದಲ್ಲಿ ಗಂಡಸಿಗಿಂತ ಮಹಿಳೆ ಹೆಚ್ಚು ಶ್ರಮವಹಿಸಿ ಕೆಲಸ ಮಾಡುತ್ತಾಳೆ ಎಂಬ ನಿಯತಕಾಲಿಕೆಯ ಅಂದಾಜನ್ನೆ ನಾವು ನೋಡಿರಬಹುದು .ಗ್ರಾಮೀಣಪ್ರದೇಶದಲ್ಲಿ ತಮ್ಮ ಗಂಡಂದಿರ ಅಥವಾ ಹಿರಿಯರ ಸಹಾಯಕ್ಕೆ ಸ್ತ್ರೀಯ ಪಾತ್ರ ಇರುತ್ತಿತ್ತು, ಇರುತ್ತದೆ. ಕರಕುಶಲಕರ್ಮಿಗಳು ತಾವು ಮಾಡುವ ಕಾರ್ಯದಲ್ಲಿ ಮಹಿಳೆಯನ್ನು ತಮ್ಮ ಕಾರ್ಯದಲ್ಲಿ ಉಪಯೋಗಿಸಿಕೊಳ್ಳುತ್ತಾರೆ. ಅಥವಾ ಭಾಗಿಯಾಗುತ್ತಾರೆ. ಕುಂಬಾರ ಗಡಿಗೆ ಮಾಡುವಾಗ ಮಹಿಳೆಯನ್ನು ಕೂಡ ಅವನ ಸಹಾಯಕ್ಕೆ ನಿಲ್ಲುತ್ತಾರೆ. ಮಣ್ಣು ತರುವುದು ಮಣ್ಣನ್ನೆ ಇಡುವುದು ಅದಕ್ಕೆ ತಿಗರಿಯಿಂದ ಒಂದು ರೂಪಮಾಡಿ ಅಂದರೆ ಗಡಗೆ-ಮಡಿಕೆಮಾಡಿ ಅವುಗಳನ್ನು ಸುಡುವ ಕಾರ್ಯದವರೆಗೂ ಮಹಿಳೆಯ ಸಹಾಯ ವಿಲ್ಲದೆ ನೆಡೆಯಲಾರದು ಮತ್ತು ಕಮ್ಮಾರ ಕಬ್ಬಿಣ ಕಾಸುವಾಗ ತಿದಿಯನ್ನು ಎಳೆಯಲಿಕ್ಕೆ ಅಥವಾ ಕಾಸಿದ ಕಬ್ಬಿಣವನ್ನು ಬಡಿಯಲಿಕ್ಕೆ ಉಂಟು .ಕೊರವರು ಈ ಚಲ ಬುಟ್ಟಿ ಹೆಣೆಯುವಾಗ ಅವರು ಕಸಬರಿಕೆ ಬುಟ್ಟಿ ಇತ್ಯಾದಿ ಕಾರ್ಯಮಾಡುವ ಹಾಗೆ ಬಡಗಿತನ ಕೆಲಸದಲ್ಲಿಯೂ ಮಹಿಳೆಯ ಪಾತ್ರವನ್ನು ನಾವು ಕಾಣಬಹುದು.

ಗಂಡ ಮರದ ಕೆಲಸ ಮಾಡುವಾಗ ಅವನಿಗೆ ಏನೇ ಉಳಿ ,ಬಾಚಿ, ಯಾವುದೇ ವಸ್ತು ಬೇಕಾದರೆ ' ಏಯ್ ಆಸಾಮಾನ ತಂಬಾರೇ ' ಎಂದು ಹೊರಗಿನಿಂದ ಕೂಗು ಕೇಳಿದ ತಕ್ಷಣ ಅವರು ಏನೇ ಮಾಡುತ್ತಿರಲಿ ಅವರಿಗೆ ಬೇಕಾದ ಸಾಮಾಗ್ರಿಯನ್ನು ಕೊಡುತ್ತಾಳೆರೆ. ಬಾಚಿಮತ್ತು ಉಳಿಯನ್ನು ಮಸೆಯ ಬೇಕಿದೆ ಅಲ್ಲಿ ಸಾಣೆಕಲ್ಲು ಅಥವಾ ಮಸೆ ಮಣೆ ಇದೆ ಆದರೆ ನೀರಾಗಲಿ ಮತ್ತು ರಂಗೋಲಿ ಹಿಟ್ಟಾಗಲಿ ಬೇಕಾಗುತ್ತದೆ. ಆಗ ಒಂದು ಲೋಟ ನೀರು ಇಲ್ಲವಾದರೆ ಹಿಟ್ಟು ತಗೊಂಡುಬಾರೆ ಎಂದು ಹೇಳಿದಾಗ ಆಗವರು ಅದನ್ನು ಪೂರೈಸುತ್ತಾರೆ.

ಬಡಗಿ ಕುಡುಗೋಲು ಹಿಡಿ ಹಾಕಬೇಕು ಆಗ ಹಿಡಿ ಇರಲಿಲ್ಲದಾಗ ಅವನು ರಾತ್ರಿಹೊತ್ತು ಒಂದು ದುಂಡಾದ ಕಟಿಗೆಯನ್ನು ತೆಗೆದುಕೊಂಡು ಮಟ್ಟಿಡಿ ಒಂದು ಬಗೆಯ ಜಂತ್ರ, ಹಿಡಿಯಲಿಕ್ಕೆ ಸಹಾಯವಾಗುವ

ಸಾಮಾನುಮತ್ತು ಉಳಿಯನ್ನು ಇಟ್ಟುಕೊಂಡು ಹೆಂಡತಿಯೂ ಕೂಡ ಹಾಕಿ ಮಜ್ಜಿಗೆ ಕಟೆಯುವಾಗ ಎಳೆಯುವಹಾಗೆ ಎಳೆಯುತ್ತಾರೆ ಅವನು ಅದನ್ನು ಕುಡುಗೋಲು ಹಿಡಿಯನ್ನು ಜಂತ್ರ ಹಿಡಿಯುತ್ತಾನೆ

ಹೀಗೆ ಗರಗಸವನ್ನು ಎಳೆಯುವುದು ಉಜ್ಜಗೊರಡು ಎಳೆಯುವುದು ಬೈರಿಗಿ ಜಗ್ಗುವುದು ಅವನು ಮಾಡಿದ ಕೆಲಸದಲ್ಲಿ ಸಹಾಯಕರಾಗಿ ನಿಲ್ಲುತ್ತಾರೆ. ಅವರು ಅಡಿಗೆ ಮಕ್ಕಳ ಲಾಲನೆ ಪೋಷಣೆಯ ಜೊತೆಗೆ ಗಂಡ ಮಾಡುವ ಬಡಗಿತನದಲ್ಲಿ ಬಾಗವಹಿಸುತ್ತಾರೆ. ನಮ್ಮ ಮನೆಯಲ್ಲಿ ನಾವು ಸಣ್ಣವರಿದ್ದಾಗ ನಮ್ಮಪ್ಪ ಜೊತೆ ನಮ್ಮವ್ವ ಕೂಡ ಗರಗಸಯಳೆಯುವುದು, ಬೈರಿಗೆ ಜಗ್ಗುವುದು ಇತ್ಯಾದಿ ಎಲ್ಲ ಕೆಲಸದಲ್ಲಿ ಭಾಗಿಯಾಗಿದ್ದಾರೆ . ಆದರೆ ಅವರಿಗೆ ಸಮಾಜದಲ್ಲಿ ಏನು ತಿಳಿದುಕೊಳ್ಳುತ್ತಾರೊ ಎಂಬ ಭಯ ಅವರಿಗಿರುವುದಿಲ್ಲ. ಅಷ್ಟೆ ಮುಗ್ದ ಸ್ವಬಾವದ ಸ್ತ್ರಿಯರು ತಮ್ಮ ಗಂಡಂದಿರು ಮಾಡುವಕೆಲಸದಲ್ಲಿ ಬೆನ್ನಿಗೆ ಆಸರೆ ಯಾಗಿ ಸಹಾಯಕರಾಗಿನಿಲ್ಲುತ್ತಾರೆ. ಎಂಬುದನ್ನು ನಾವು ಆಧುನಿಕ ಯುಗದಲ್ಲಿಯು ಕೂಡ ನೋಡಬಹುದು. ಬಡಗಿ ಕಾಯಕದಲ್ಲಿ ಭಾಗಿಯಾಗುವ ಅಥವಾ ಆಕೆ ಪಾತ್ರದ ಜೋತೆ ಜೊತೆಗೆ ನಿಷೇದ ನಿರ್ಬಂದಗಳನ್ನು ನಾವು ಕಾಣಬಹುದು ಬಡಗಿ ಉಪಕರಣವನ್ನು ಆಕೆ ತುಳಿಯಬಾರದು. ಈ ಉಪಕರಣಗಳು ಕಾಳಿದೇವಿಯ ಸ್ವರೂಪ ಎಂಬ ಭಾವನೆ ಬೆಳೆದು ಕೊಂಡು ಬಂದಿರುವದಿಂದ ಸ್ತ್ರೀ ಯೌವನ ವಸ್ಥೆಯ ನಂತರ ತಿಂಗಳಿಗೊಮ್ಮೆ ಮುಟ್ಟು ಆಗುವ ಸಂದರ್ಭಗಳಲ್ಲಿ ಸಾಮಾಗ್ರಿಗಳನ್ನು ಮುಟ್ಟುವಂತಿಲ್ಲ. ಹಾಗೆ ಪೂಜೆ ಪುನಸ್ಕಾರ ಮಾಡಕೂಡದು. ಅವಳು ಯಾವುದೆ ಪೂಜೆ ಬಾವನೆಯಿಂದ ಕಾಣುವ ವಸ್ತುಗಳಿಂದ ೩ ದಿನ ನಿರ್ಭಂದಿತಳಾಗಿರುತ್ತಾರೆ.ಆ ಸಂದರ್ಭದಲ್ಲಿ ಅವರು ಆ ಕೆಲಸ ಕಾರ್ಯಗಳು ಏಷ್ಟೇ ಅವಶ್ಯವಿದ್ದರೂ ಅದರಿಂದ ದೂರ ವಿರಬೇಕಾಗುತ್ತದೆ. ಒಂದು ವೇಳೆ ಹಾಗೆ ಮಾಡಿದರೆ ಅನ್ನಕ್ಕೆ ದ್ರೋಹ ಮಾಡಿದಹಾಗೆ ಮತ್ತು ಅವರು ಗಂಡಸರಂತೆ ಬಾಚಿಕೆತ್ತುವುದು, ಹುಗುಲು (ಹೆಜ್ಜ) ಹೊಡೆಯುವದು ಇನ್ನು ಕೆಲವು ಕೆಲಸವನ್ನು ಅವರು ಮಾಡುವುದಿಲ್ಲ ಏಕೆಂದರೆ ಗಂಡಸಗಿಂತ ದೈಹಿಕವಾಗಿ ಭಿನ್ನವಾಗಿರುವುದರಿಂದ ಅಂತಹ ಕೆಲಸವನ್ನು ಮಾಡುವುದಿಲ್ಲ ಒಂದು ವೇಳೆ ಸಮರ್ಥರಿದ್ದರೂ ಅದು ಅವರಿಗೆ ನಿಷೇದ .ಗ್ರಾಮಿಣ ಪ್ರದೇಶವಲ್ಲಿ ಸ್ತ್ರಿಯು ಹೊಸಲಿ ಒಳಗೆ ಇರಬೇಕೆಂಬ ನಿಯಮಕೂಡ ಇದೆ ಅವರಿಗೆ ಇಂತಹ ವಿಚಾರಗಳಿಗೆ ಒಳಗಡೆನೆ ಸ್ವತಂತ್ರವಾಗಿರುತ್ತಾರೆ. ಹೊರಗಡೆ ಕೆಲವೊಂದು ಸಂಪ್ರದಾಯ ನಂಬಿಕೆ ಆಚರಣೆಗಳಿಗೆ ನಿರ್ಭಂಧಿತರಾಗಿರುತ್ತಾರೆ.ಎಂದು ಹೇಳಬಹುದು.



ತನ್ನ ಗಂಡನ ಜೊತೆಗೆ ತಮ್ಮ ಮನೆತನಕ್ಕೆ ತನ್ನನ್ನು ತೊಡಗಿಸಿಕೊಂಡಿದ್ದಾರೆ ಎಂಬುದಕ್ಕೆ ಉದಾಹರಣೆ.

ಹರಪನಹಳ್ಳಿಯಲ್ಲಿ ಒಬ್ಬ ಮಹಿಳೆ ತಮ್ಮ ಕುಟುಂಬಕ್ಕೆ ತನ್ನದೇ ಆದ ಕಾಣಿಕೆ ಸಲ್ಲಿಸುತ್ತಾ ಬಂದಿದ್ದಾರೆ. ಅವರು ತನ್ನ ಗಂಡನ ಜೊತೆಗೆ ಬಡಗಿತನ ಕೆಲಸಕ್ಕೆ ಬಾಗಿಯಾಗುವುದರ ಜೊತೆಗೆ ತಮ್ಮ ಆರ್ಥಿಕ ಪರಿಸ್ಥಿತಿ ಸುಧಾರಿಸಲಿಕ್ಕೆ ದಿನಕ್ಕೊಂದು ಮಣ್ಣಿನ ಗಣೇಶನನ್ನು ಮಾಡುತ್ತಾಳೆ. ವರ್ಷಕ್ಕೆ ೩೬೫ ವಿಗ್ರಹಗಳನ್ನು ಮಾಡಿ ಗಣೇಶ ಚತುರ್ಥಿಯ ದಿನಗಳ ಹತ್ತಿರ ಬಂದಾಗ ಅವುಗಳಿಗೆ ಬಣ್ಣ ಹಚ್ಚಿ ಮಾರಾಟ ಮಾಡಿ ಜೀವನಕ್ಕೆ ಸಹಾಯಕಳಾಗಿದ್ದಾರೆಳೆಂದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ತಿಳಿಯಿತು.

ಇಂತಹ ನಿದರ್ಶನಗಳು ಹಲವಾರು ಸಿಗುತ್ತವೆ. ಸ್ತ್ರೀ ಗಂಡಸಿನಷ್ಟೇ ಸರಿ ಸಮಾನರು ವಿಶ್ವದಲ್ಲಿ ದುಡಿಯುವ ವರ್ಗದಲ್ಲಿ ಮಹಿಳೆಯೇ ಮೇಲುಗೈ ಎಂದು ಅಂದಾಜು ಇದೆ. ಸ್ತ್ರೀ ದೈಹಿಕವಾಗಿ ಗಂಡಸಿಗಿಂತ

ಶಕ್ತಿ ಹೀನವಾದರೂ ಇನ್ನುಳಿದ ಎಲ್ಲಾ ವಿಚಾರಗಳಲ್ಲಿ ಸರಿಸಮಾನರು ಎಂದು ಹೇಳಬಹುದು.

ಕುಟುಂಬವನ್ನು ಗಂಡನ ವೃತ್ತಿಯ ಹಿನ್ನೆಲೆಯಲ್ಲಿ ನಿರ್ವಹಿಸುವುದೇ ಒಂದು ದೊಡ್ಡ ಜವಾಬ್ದಾರಿ. ಒಂದು ಉತ್ಪಾದನಾ ಘಟಕದ ಮೇಲುಸ್ತುವಾರಿ ಕೆಯ ಕೆಲಸವನ್ನೇ ಮಹಿಳೆ ಮಾಡಿದಂತೆ ಕಾಣುತ್ತದೆ. ಹಳ್ಳಿಗಾಡಿನ ಕರಕುಶಲ ಕುಟುಂಬಗಳ ಹೊಣೆ ಹೊತ್ತು ಪೂರಕವಾಗಿ ಹೆಗಲು ಕೊಡುವುದು ಹೆಣ್ಣಿನ ಜವಾಬ್ದಾರಿ ಎಂತಹದ್ದೆಂಬುದನ್ನು ಸೂಚಿಸುತ್ತದೆ.

# ೫. ಬಡಿಗಿ ಸಮುದಾಯ ಮತ್ತು ಸಮಾಜ

## ೫.೧. ಇವರ ಸಾಮಾಜಿಕ ಸ್ಥಾನಮಾನಗಳು :

ವಿಶ್ವಕರ್ಮ ಸಮುದಾಯಗಳಿಗೆ ಸಮಾಜದಲ್ಲಿ ಒಂದು ನೆಲೆಯನ್ನು ಕಂಡುಕೊಳ್ಳುವುದರ ಮೂಲಕ ಅವರದೇ ಆದ ಸ್ಥಾನವನ್ನು ಹೊಂದಿದ್ದಾರೆ. ಇವರು ಆದ್ಯಾತ್ಮ ಮಾರ್ಗ ಮಂತ್ರ, ತಂತ್ರ, ಈ ಎಲ್ಲಾ ಬಗೆಯ ಜ್ಞಾನಗಳಲ್ಲಿ ಬಹಳ ಪ್ರಮುಖ ಪಾತ್ರ ವಹಿಸುತ್ತಾರೆ. ಕಾಳಿ ಪರಂಪರೆಯ ಬೆಸುಗೆ ಈ ಸಮುದಾಯಕ್ಕಿದೆ. ಕಾಳಿಗೂ ಪಂಚಾಳರಿಗೂ ದೊಡ್ಡ ಸಂಬಂಧವಿದೆ. ಈ ಕಾಳಿಗೂ ಕೆಳವರ್ಗದ ಗ್ರಾಮ ದೇವತೆಯಆಚರಣೆಗಳಿಂದ ಹಿಡಿದು ನೇರ ಸಂಬಂಧಗಳಿವೆ. ಅದಕ್ಕೇನೆ ನಮ್ಮ ಎಲ್ಲಾ ತಳ ಸಮುದಾಯಗಳೆಂದು ಕರೆಸಿಕೊಳ್ಳುವ ಈ ಸಮಾಜದ ಜೊತೆ ವಿಶ್ವಕರ್ಮ ಸಾವಯುವ ಸಂಬಂಧಗಳಿಟ್ಟುಕೊಂಡಿದ್ದಾನೆ.

ವೇದಗಳನ್ನು ಸೃಷ್ಟಿಸಿದ ವಿಶ್ವಕರ್ಮರು ಹೊರಗಿನಿಂದ ಆರ್ಯರು ಅಂದರೆ ಬ್ರಾಹ್ಮಣರು ಇವರಿಬ್ಬರಿಗೂ ಜ್ಞಾನದ ದೊಡ್ಡ ಪೈಪೋಟಿ ಆಯಿತು. ಆ ಹಿನ್ನೆಲೆಯಲ್ಲಿ ಆ ಜ್ಞಾನವನ್ನು ವಿಶ್ವಕರ್ಮರಿಂದ ಕಸಿದುಕೊಂಡು ಪೈಪೋಟಿಯಿಂದ ಬರಲು ಪ್ರಯತ್ನಿಸಿ ಸಫಲರಾದರು. ಇವರಿಗಿದ್ದ ಎಲ್ಲಾ ಬಗೆಯ ಸಾಮಾಜಿಕ ಸಾಂಸ್ಕೃತಿಕ ಸ್ಥಾನಮಾನಗಳನ್ನು ಕದ್ದರೂ ಅವರು ತಮ್ಮ ಸ್ಥಾನವನ್ನೇ ಸ್ಥಾಪಿಸಿಕೊಂಡರು. ಆಗ ಮೂಲ ಸಮುದಾಯ ಸೋಲನ್ನು ಅನುಭವಿಸಿತು. ಈ ಸೋಲಿನಿಂದ ವಿಶ್ವಕರ್ಮರು ಅತ್ಯಂತ ಮೇಲ್ಜಾತಿಯೂ ಕೆಳಜಾತಿಯೂ ಮಧ್ಯಮ ಜಾತಿಗಳೆಂದು ಕರೆಯಲಿಕ್ಕೆ ಬರಲು ಸಾಧ್ಯವಾಗಿಲ್ಲ. ಅತಂತ್ರವಾದ ರೀತಿಯಲ್ಲಿ ಪಂಚಾಳರು ತಮ್ಮ ಅಸ್ತಿತ್ವವನ್ನು ಯಾವುದೇ ಹಳ್ಳಿಗಳಲ್ಲಿ ಊರಿಗೊಬ್ಬ ಪಂಚಾಳ ಎನ್ನುವಂತೆ ಅವರ

ಸಂಕೀರ್ಣ ಕಡಿಮೆಯಾಯಿತು. ಆದರೂ ಇತರರಿಗಿಂತ ತಮ್ಮ ಸ್ಥಾನವನ್ನು ಉಳಿಸಿಕೊಳ್ಳಲಿಕ್ಕೆ ಪ್ರಯತ್ನಿಸಿದರು.

ಕಂಚಿ ಕಾಳಿಯು ತನ್ನ ಬಲಗೈಯಲ್ಲಿ ಕೆಲವು ಜಾತಿಗಳನ್ನು ತನ್ನ ಎಡಗೈಯಲ್ಲಿ ಕೆಲವು ಜಾತಿಗಳನ್ನು ಇಟ್ಟುಕೊಂಡಿದ್ದರಿಂದ ಅವು ಎಡ ಮತ್ತು ಬಲ ಜಾತಿಗಳಾದವೆಂದು ಹೇಳುತ್ತಾರೆ. ಕೊಟಗರ ಪಳ್ಳಿ ರಾಮಣ್ಣರವರು ಸಿಂದ್ ಮಾದಿಗರ ಸಂಸ್ಕೃತಿಯಲ್ಲಿ ಹೇಳುತ್ತಾರೆ.

ಡಾ॥ ಕೆ.ಆರ್.ಹನುಮಂತನ್ 'ಅನ್ ಟಚ್‌ಬಲಟಿ ಮೆಡಿವೆಲ್ ತಮಿಳು ಸೊಸೈಟಿ 'ಯಲ್ಲಿ ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಎಡಗೈ ವಿಭಜನೆಯ ಕಾಳಿಯನ್ನು ವಾಮಾಚಾರದ ಮೂಲಕ ಪೂಜಿಸುತ್ತಿದ್ದ ಪಂಚಾಳರಿಂದಾಗಿ ಹುಟ್ಟಿರಬಹುದೆಂದು ಹಾಗೂ ಬ್ರಾಹ್ಮಣತ್ವವನ್ನು ತಿರಸ್ಕರಿಸಿದವರೆಲ್ಲರಿಗೂ ಬರುಬರುತ್ತಾ ಇದೇ ಹೆಸರು ಅನ್ವಯವಾಗಿರಬಸುದೆಂದು ಊಹಿಸುತ್ತಾರೆ. ಡಾ॥ ಜೋಷಿ ಕೆ.ಎಸ್‌ರವರು ಒಂದು ಕಡೆ ಪಂಚಾಳ ಪಂಡಿತರು ಕಾಳಮುಖ ಪಂಡಿತರಾಗಿ ಸ್ಥಾನಪತಿಗಳಾಗಿ ಸ್ಥಪತಿಗಳಾಗಿ ಈ ಸಮಾಜದಲ್ಲಿ ಪ್ರತಿಷ್ಠಿತರಾಗಿದ್ದ ಬಗ್ಗೆ ಐತಿಹಾಸಿಕ ದಾಖಲೆಗಳು ಸಾಕಷ್ಟು ದೊರೆಯುತ್ತವೆ ಎಂದು 'ಕಾಳಿಕಾ ಮಾತೆ ಆರಾಧಕರು' ವಿಶ್ವಕರ್ಮರು ಎಂದು ಸಂ.ಕರ್ನಾಟಕ ಸಾಪ್ತಾಹಿಕ ಸೌರಭದ ಶೀರ್ಷಿಕೆಯಲ್ಲಿ ತಿಳಿಸಿದ್ದಾರೆ (೧೦.೪.೯೮೩)

ಚೋಳ ಸಾಮ್ರಾಜ್ಯ ಆಡಳಿತದಲ್ಲಿ ಬ್ರಾಹ್ಮಣರು ಕೈ ಮೇಲಾಗಿತ್ತು. ಬ್ರಾಹ್ಮಣೇತರು ಕುದಿಯತೊಡಗಿದ್ದರು. ಪಂಚಾಳರು ಬ್ರಾಹ್ಮಣರೊಂದಿಗೆ ಮುಖಾಮುಖಿಯಾಗಿ ನಿಂತು ಸಮರ್ಥ ಸವಾಲೊಡ್ಡಲು ಆರಂಭಿಸಿದ ಕೂಡಲೇ ರಾಜರು ಬ್ರಾಹ್ಮಣರನ್ನು ನಿರ್ಲಕ್ಷಿಸುವಂತಿಲ್ಲ. ಇತ್ತ ಪಂಚಾಳರನ್ನು ನಿರ್ಲಕ್ಷಿಸುವುದು ಅಸಾಧ್ಯ ಪರಿಸ್ಥಿತಿಗೆ ಒಳಗಾಗಿದ್ದರು ( ಸಿಂದ್ ಮಾದಿಗರ ಸಂಸ್ಕೃತಿ ಕೊ.ರಾ.)ಸ

ಪಂಚಾಳರು ಕಾಳಿಯನ್ನು ವಾಮಾಚಾರದ ಮೂಲಕ ಆರಾಧಿಸುತ್ತಿದ್ದ ಇತರ ಕರಕುಶಲ ಕರ್ಮಿ ಜಾತಿಗಳನ್ನು ಎಡಗೈ ವೇದಿಕೆಯಡಿ ಸಂಘಟಿಸಿ ನಾಯಕತ್ವ ವಹಿಸಿದರೆ ಬ್ರಾಹ್ಮಣರು ಕೃಷಿ ಮೂಲದ ಬಲಿಷ್ಠ ಜಾತಿಗಳ ಮೊರೆ ಹೋದರು.

ಹೀಗೆ ಎರಡು ಗುಂಪಾಗಿ ಎಲ್ಲಾ ಜಾತಿಗಳೂ ತಮ್ಮ ಕುಲ ಗೌರವಕ್ಕೆ ಸದಾ ಕಾದಾಡುತ್ತಾ ಬಂದಿದ್ದಾರೆನ್ನಲು ಒಂದೆರಡು ನಿದರ್ಶನಗಳು ಇಲ್ಲಿವೆ.

೧೮೬೧ ರಲ್ಲಿ ಹಬ್ಬದ ಪ್ರಯುಕ್ತ ವಿಶ್ವಕರ್ಮರು ತಮ್ಮ ಮನೆಗಳಿಗೆ ಸುಣ್ಣ ಬಳಿಯಲು ಹಾಗೂ ತೋರಣ ಕಟ್ಟಲು ನಿರ್ಧರಿಸಿದರು. ಇದಕ್ಕೆ ಬಲಗೈಯವರು ಆಕ್ಷೇಪಿಸಿ ಮ್ಯಾಜಿಸ್ಟ್ರೇಟರ್‌ರಿಂದ ತಡೆಯಾಜ್ಞೆ ತರಲು ಪ್ರಯತ್ನಿಸಿದರು. ಮಾಜಿಸ್ಟ್ರೇಟರ್ ಇದಕ್ಕೆ ಒಪ್ಪದೇ ಹೊದುದ್ದರಿಂದ ಸರ್ಕಾರಕ್ಕೆ ತಂತಿ ರವಾನಿಸಿದರು. ತಂತಿಯಲ್ಲಿ ವಿಶ್ವಕರ್ಮರು ತಮ್ಮ ಜಾತಿಗೆ ಹೊರತಾದ ರೀತಿ ನೀತಿಗಳನ್ನು ಆಚರಿಸಲು ಮುಂದಾಗಿರುವುದನ್ನು ಕೂಡಲೇ ತಡೆಯಬೇಕೆಂದು ಕೋರಲಾಗಿತ್ತು. ಆದರೆ ಸರ್ಕಾರ ಮಾಜಿಸ್ಟ್ರೇಟರ್ ಕ್ರಮವನ್ನೇ ಎತ್ತಿ ಹಿಡಿದು ವಿಶ್ವಕರ್ಮರಿಗೆ ಉಳಿದವರಂತೆ ತಮ್ಮ ಮನೆಗಳಿಗೆ ಸುಣ್ಣ ಬಳಿಯುವ ಹಕ್ಕಿದೆ ಎಂದು ಸ್ಪಷ್ಟಪಡಿಸಿತು ( ಸಿಂದ್

ಮಾದಿಗರ ಸಂಸ್ಕೃತಿ ಕೊ.ರಾ.ಪೇಜಿ೬೭)

ಇತರ ಜಾತಿಗಳಲ್ಲಿ ವಿಶ್ವಕರ್ಮರು ಹಠ ಬಿಡದೆ ತ್ರಿವಿಕ್ರಮನಂತೆ ತಮ್ಮ ಘಟ್ಟಿಗಾದರೂ ಮರ್ಯಾದಸ್ಥ ಸ್ಥಾನಮಾನಗಳನ್ನು ಹೋರಾಟದ ಮೂಲಕವೇ ಗಳಿಸಿಕೊಂಡ ಪಂಚಾಳರನ್ನು ಪ್ರಶಂಸಿಸಲೇಬೇಕು.

ವಿಶ್ವಕರ್ಮರು ಈ ಪರಂಪರಾನುಗತ ಸ್ವಾವಲಂಬನೆ ಬ್ರಾಹ್ಮಣರಿಗೆ ಸರಿ ಜೀಳದೇ ಕ್ರಿ.ಶ. ೧೮೧೪ ರಲ್ಲಿ ಅವರು ಕಟೆಕಟೆ ಹತ್ತಿದರು. ಹಿಂದೂ ಧರ್ಮದ ಶಾಸ್ತ್ರಗಳ ಪ್ರಕಾರ ಬ್ರಾಹ್ಮಣರಿಗೆ ಮಾತ್ರ ಪುರೋಹಿತರಾಗುವ ಹಕ್ಕಿದೆ ಎಂದು ಉಳಿದವರಿಗೆ ಇಲ್ಲವೆಂದು ವಾದಿಸಿ ವಿಶ್ವಕರ್ಮರ ಮದುವೆಗಳಲ್ಲಿ ಅವರೇ ಪುರೋಹಿತರಾಗುವುದನ್ನು ತಡೆದು ಹಕ್ಕನ್ನು ತಮಗೆ ನೀಡಬೇಕೆಂದು ಒತ್ತಾಯಿಸಿದರು. ಆದರೆ ನ್ಯಾಯಾಲಯ ಬ್ರಾಹ್ಮಣರ ವಾದವನ್ನು ಪುರಸ್ಕರಿಸದೇ ವಿಶ್ವಕರ್ಮರ ಹಕ್ಕನ್ನು ಎತ್ತಿ ಹಿಡಿಯಿತು ಎಂಬ **ಮೈಕೇಲ್ ಮಾಫೆಟ್**ರವರು 'ಆ್ಯನ್ ಅನ್ ಟಚಬಲಿಟಿ ಕಮ್ಯುನಿಟಿ ಇನ್ ಸೌಥರ್ನ್ ಇಂಡಿಯಾ' (ಪುಟ ೪೦-೪೧) ದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಹೀಗಿದ್ದರೂ ಇವರು ಇಂದು ಅತಂತ್ರ ಸ್ಥಿತಿಯಲ್ಲಿದ್ದಾರೆಂಬುದು ತಿಳಿಯುತ್ತದೆ. ಒಟ್ಟು ಸಮಾಜದಲ್ಲಿ ವರ್ಣ, ವರ್ಗ ಜಾತಿ, ಲಿಂಗಬೇಧ, ಈ ನೆಲೆಯಲ್ಲಿ ನೋಡಿದಾಗ ವರ್ಣ ವ್ಯವಸ್ಥೆಯಲ್ಲಿ ವ್ಯತ್ಯಾಸಗಳೇನಿಲ್ಲ. ಹಾಗೆ ನೋಡಿದರೆ ಈ ದೇಶ ವರ್ಣವನ್ನು ಯಾವಾಗಲೂ ಅವಲಂಬಿಸಿಲ್ಲ. ಜಾತಿಯ ಬಗ್ಗೆ ಈ ಮೇಲಿನಂತೆ ವಿವರಿಸಿದೆ. ಲಿಂಗಬೇಧ ಈ ಸಮಾಜದಲ್ಲಿ ಯಾವಾಗಲೂ ಹೊಗೆಯಾಡುತ್ತಾ ಇರುತ್ತದೆ. ಈ ಮಹಿಳೆಯರು ಮತ್ತು ಪುರುಷರು ನಡುವೆ ಅಷ್ಟೊಂದು ಪೈಪೋಟಿ ನಡೆಯುವುದಿಲ್ಲ. ಯಾಕೆಂದರೆ ಇವರು ಆರ್ಥಿಕವಾಗಿ ಸಬಲರಲ್ಲ, ಲಿಂಗಬೇಧದಲ್ಲಿ ಅಂತಹ ಸಮಸ್ಯೆ ಇಲ್ಲ.

ವೇದಗಳು ಜ್ಞಾನವನ್ನು ಅಳವಡಿಸಿಕೊಂಡುಬಂದ ಮುಖ್ಯವಾದ ಸಾಂಸ್ಕೃತಿಕ ಸಮುದಾಯಗಳಾಗಿದ್ದವು. ವೇದಗಳ ಜಗತ್ತಿಗೆ ಮಾದರಿಗೆ ಒಳಪಟ್ಟಿವೆ. ಜಾತಿ, ಧರ್ಮಕ್ಕೆ ಒಳಪಡುವುದಿಲ್ಲ. ಅದೊಂದು ಜ್ಞಾನ ತತ್ವಜ್ಞಾನದ ಮೂಲಕ ಆಧ್ಯಾತ್ಮವನ್ನು ಹುಡುಕುತ್ತವೆ. ಆ ಬಗೆಯ ತಿಳುವಳಿಕೆಯನ್ನು ಪಂಚಾಳರು ರೂಢಿಸಿಕೊಂಡಿದ್ದಾರೆ. ಅವು ವಿಸ್ಮೃತಿಗೆ ಅಂದರೆ ಸೋತ ನಂತರ ಅದನ್ನು ಉಳಿಸಿಕೋಳ್ಳಲು ಸಾದ್ಯವಾಗಿಲ್ಲ. ಲೌಖಿಕದಲ್ಲಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಲು ಸಾದ್ಯವಾಗದೇ ಹೊದಾಗ ಆಬಗೆಯ ಜ್ಞಾನವನ್ನು ಕಾಪಾಡಿಕೊಂಡು ಹೊಗಲು ಆಗಲಿಲ್ಲ ಅಂದರೆ ಒಂದನ್ನು ಹೊಟ್ಟೆಪಾಡಿಗಾಗಿ ಉಳಿಸಿಕೊಂಡರು, ಅವುಗಳೇ ಈ ಕಸಬುಗಳು ಕಸಬಿನ ಜೊತೆಗೆ ಇದ್ದ ಜ್ಞಾನಪರಂಪರೆಯನ್ನು ಕಾಯ್ದುಕೊಳ್ಳಲಾಗಲಿಲ್ಲ. ಅದು ಅನಿವಾರ್ಯವಾಯಿತು.

**೫.೨. ಸಮಾಜಿಕ ನೀತಿ:**

ಬಡಗಿ ಸಮುದಾಯವು ಸಮಾಜವನ್ನು ಹಲವುರೀತಿಯಲ್ಲಿ ಬಾವಿಸಿರುತ್ತಾನೆ. ಸಮಾಜದಲ್ಲಿ ಸಾಮರಸ್ಯವನ್ನು ಹೊಂದಿರುತ್ತಾನೆ. ಅದು ಅವನಿಗೆ ಅನಿವಾರ್ಯವಾಗುತ್ತದೆ. ಸಮಾಜವನ್ನು ಬಿಟ್ಟು ಅವನು ಹೊಟ್ಟೆಗೆ ಇಲ್ಲದಂತಾಗುತ್ತದೆ. ಯಾರನ್ನು ಇವನು ಎದರು ಹಾಕಿಕೊಳ್ಳುವಂತಿಲ್ಲ **ರೊಕ್** ಎಂದರೆ **ಅಕ್ಕಿಬಾನು,** ಅಂದರೆ ರೈತರ ಉಪಕರಣಗಳನ್ನು ತಂದಾಗ ಇವನು ಕೆಲಸಮಾಡಲೇ ಬೇಕು ಕೊಡತಿಯಿಂದ

ಬಡಿದರೆ ಮಾತ್ರ ಅವನಿಗೆ ಅನ್ನ ಇಲ್ಲವಾದರೆ ಅವನು ತಣ್ಣೀರು ಕುಡಿದು ಮಲಗುವ ಪರಿಸ್ಥಿತಿ ಬರಬಹುದು. ಇವರು ದಿನ ಕೆಲಸ ಮಾಡುತ್ತಿದ್ದರೂ ಇವರು ಆರ್ಥಿಕವಾಗಿ ಮುಂದೆ ಬರುವಂತಾಗಿಲ್ಲ. ಅವನೇನೆ ಬೆವರಿಳಿಸಿದರು ಸುಖವಿಲ್ಲ. ಅದಕ್ಕೆ "ಮುಂಜಾನೆ ಮಾಡಿದ್ದು ಸಂಜೆಗಿಲ್ಲ, ಸಂಜೆ ಮಾಡಿದ್ದು ಮುಂಜಾನೆಗಿಲ್ಲ". ಎಂಬ ಗಾದೆಯಂತೆ ಇವರ ಬದುಕು ಸಾಗಿದೆ. ಇವರ ಜೀವನ ಸಾಮರಸ್ಯದಿಂದ ಕೂಡಿರುತ್ತದೆ. ಮಹಿಳೆಯರು ಮದುವೆ ಸಂದರ್ಭದಲ್ಲಿ ಹೇಳುವ ಒಡಪುಗಳನ್ನು ಅವರ ಚಿತ್ರಣವನ್ನೆ ನಿಡುತ್ತದೆ.

ಅಡಿಕೆ ಬೆಟ್ಟಿ
ತುಳಿಸಿಕಟ್ಟಿ
ಗಂಟು ಬಡ್ಡಿ ಕೆತ್ತಾಕ ಬಲು ಗಟ್ಟಿ.

ಈರೀತಿಯ ಸಮಾಜದ ರೈತರ ಉಪಕರಣಗಳನ್ನು ತಯಾರಿಸುವಾಗ ಗಂಟು ಬಡ್ಡಿಯನ್ನು ಕೆತ್ತುವ ಸಂದರ್ಭ ಬರುತ್ತದೆ. ಈ ಒಡಪು ಅದನ್ನು ಸೂಚಿಸುತ್ತದೆ.

ಅರಿಷಿಣ ನಂಬರ್
ಪಾಟ್ಲಿ ಸಾಂಬಾರ್
ಕಟಿಗಿ ಕೆಲ್ಸದಾಗ
ಒನ್ನೇ ನಂಬರ್-

ಈ ಒಡಪು ಬಡಗಿಯ ಕೆಲಸದ ಕುಶಲತೆಗೆ ಸಂಬದಿಸಿದ್ದಾಗಿರುತ್ತದೆ.

ಮಲ್ಲಿಗೆ ಹೂವಿನ ಮಂದಾರ
ಶ್ರೀ ಗಂದದ ಬಜಾರ
ನಮ್ಮ ವರ ಮಾಡೊದು
ಕಟ್ಟಿಗೆ ಕಾರಬಾರ.

ಬಡಗಿ ಕಟ್ಟಿಗೆ ಕೆಲಸ ಮಾಡುವುದನ್ನು ಸೂಚಿಸುತ್ತದೆ. ಇನ್ನು ಸರ್ವಜ್ಞ ನ ವಚನಗಳು ಕೂಡಾ ಇಲ್ಲಿ ನೊಡಬಹುದು.

ಹಡಗು ಕಡಲಿಗೆ ಬೇಕು, ಗುಡುಗು ಮಿಂಚಿಗೆ ಬೇಕು,
ಕಡಗದ ಕೈಗೆ ಸೊಸೆ ಬೇಕು ಊರಿಂದ
ಬಡಗಿ ತಾ ಬೇಕು ಸರ್ವಜ್ಞ |

ಎಂಬ ವಚನವು ಬಡಗಿ ಊರಿಗೆ ಎಷ್ಟು ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಸಮಾಜವನ್ನು ಹಲವು ರೀತಿಯ ಬಡಗಿಯರು ಬಾವಿಸಿರುವುದು ಕಂಡು ಬರುತ್ತದೆ. ನಾವು ಬಡಗಿಯರು ಅವರಿಗೆ ಬೇಕಾದ ಕೆಲಸಗಳನ್ನು ಮಾಡಿಕೊಡುತ್ತೆವೆ. ಅದಕ್ಕವರು ಹಣ ಮತ್ತು ಧಾನ್ಯಗಳನ್ನು ಕೊಡುತ್ತಾರೆ. ಆ ರೀತಿಯಾದಂತ

ಭಾವನೆಯನ್ನು ಹೊಂದಿರುತ್ತಾರೆ. ರೈತರು ಕುಂಟೆ ಹಾಯಿಸು ಎಂದು ಬಂದಾಗ ಸಿಟ್ಟಾಗದೇ ಹಾಯಿಸುತ್ತಾನೆ. ಕಾರಣ ಇಷ್ಟೇ ಸಮಾಜದ ಜನರೊಂದಿಗೆ ಹೊಂದಿಕೊಂಡಿರುವುದರಿಂದ ಮತ್ತು ತಮ್ಮ ಜೀವನೋಪಾಯ ಅವರಿಂದಲೇ ನಡೆಯುವುದರಿಂದ ಯಾವುದೇ ಜಗಳಕ್ಕೆ ಹೋಗುವುದಿಲ್ಲ.

**ಸಾಮಾಜಿಕ ಒಪ್ಪಂದಗಳು :**

ಪಾಂಚಾಳ ಸಮುದಾಯದವರು ಸಮಾಜದಲ್ಲಿ ಜೀವನೋಪಾಯಕ್ಕಾಗಿ ವೃತ್ತಿಯನ್ನು ಅವಲಂಬಿಸಿ ಇತರ ಗುಂಪುಗಳ ಜಾತಿಗಳ ಜೊತೆಗೆ ಜೀವಿಸಬೇಕಾದ ಅಗತ್ಯ ಇತ್ತು. ಇಲ್ಲವಾದರೆ ಅವರು ಸ್ಥಿರತೆಯನ್ನು ಕಂಡುಕೊಳ್ಳುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಒಂದೊಂದು ಸಮುದಾಯಗಳು ಕೂಡ ಈ ಬಡಗಿ ಅಥವಾ ಪಂಚಾಳ ಜೊತೆ ಸಂಬಂಧವನ್ನು ಮತ್ತು ಒಪ್ಪಂದಗಳನ್ನೇ ನಾವು ನೋಡ ಬಹುದು. ಅಂದರೆ ಕರಕುಶಲ ವೃತ್ತಿ ಒಪ್ಪಂದಗಳನ್ನು ಕಾಣಬಹುದು. ಅದು ಅವರಿಗೆ ಅನಿವಾರ್ಯವಾಗಿತ್ತು.

**೫.೩. ಸಾಮಾಜಿಕ ಒಪ್ಪಂದಗಳು :**

ಕುಂಬಾರರಿಗೆ ತಿಗರಿಯನ್ನು ಬಡಗಿ ಮಾಡಿಕೊಟ್ಟರೆ ಅವರು ಅಡಿಗೆಗೆ ಬೇಕಾಗುವ ಗಡಿಗಳನ್ನು ಕುಂಬಾರರು ಕೊಡುತ್ತಾರೆ. ಇದು ಕುಂಬಾರರಿಗೂ ಮತ್ತು ಬಡಿಗಿಗಳಿಗೂ ಇರುವ ಒಪ್ಪಂದವಾಗಿರುತ್ತದೆ.

ರೈತರಿಗೂ ವ್ಯವಸಾಯವನ್ನು ಮುಖ್ಯ ಉದ್ಯೋಗವನ್ನು ಮಾಡಿಕೊಂಡಿರುವುದರಿಂದ ಕೃಷಿಗೆ ಬಳಸುವ ಉಪಕರಣಗಳನ್ನು ಈ ಬಡಗಿ ತಯಾರಿಸಿಕೊಡುತ್ತಾನೆ. ಕೃಷಿಕರು ಅದರ ಬದಲಾಗಿ ಧವಸ ಧಾನ್ಯಗಳನ್ನು ಅವರಿಗೆ ಕೊಡುತ್ತಾರೆ. ಒಂದು ಕೂರಿಗಿಗೆ ೪ ಗಿದ್ನ ನೇಗಿಲಿಗೆ ೨ ಗಿದ್ನ, ಎಡೆ ಕುಂಟಿಗೆ ೧ ಗಿದ್ನ, ಹೀಗೆ ಉಪಕರಣಗಳನ್ನು ತಯಾರಿಸಿ ಈ ಅಳತೆಯನ್ನು ಜೋಳವನ್ನು ಪಡೆದುಕೊಳ್ಳುತ್ತಿದ್ದರು. ಹೀಗೆ ಬಡಗಿ ಮತ್ತು ಕೃಷಿಕರ ನಡುವೆ ಒಪ್ಪಂದಗಳಾಗಿರುತ್ತವೆ.

ಚಮ್ಮಾರರಿಗೆ ಅವರು ಬಳಸುವ ಉಪಕರಣಗಳನ್ನಾಗಲೀ, ಗೃಹೋಪಕರಣಗಳನ್ನು ಮಾಡಿಕೊಟ್ಟು ಅವರಿಂದ ತನ್ನ ಕಾಲಿಗೆ ಬೇಕಾಗುವ ಮೆಟ್ಟುಗಳನ್ನು ಪಡೆಯುತ್ತಿದ್ದನು.

ಕೊರವ ಬುಟ್ಟಿಯನ್ನು ಕಸಬರಿಗೆಯನ್ನು ತಯಾರಿಸುವುದರಿಂದ ಅವು ಮನೆಯ ಬಳಕೆಗೆ ಬೇಕಾಗುವ ವಸ್ತುಗಳಾಗಿವೆ. ಆದ್ದರಿಂದ ಈಉಪಕರಣಗಳು ತಮಗೂ ಅವಶ್ಯವಿರುವುದರಿಂದ ಅವುಗಳನ್ನು ಪಡೆದು ಅವರಿಗೆ ಕುಡುಗೋಲು ಮತ್ತು ಇತರ ಉಪಕರಣಗಳನ್ನು ತಯಾರಿಸಿ ಕೊಡುತ್ತಿದ್ದನು.

ಹೀಗೆ ಹಲವಾರು ಜಾತಿಗಳೊಂದಿಗೆ ವೃತ್ತಿಗೆ ಬದಲಾಗಿ ವೃತ್ತಿಯನ್ನು ಅವಲಂಬಿಸಿರುವುದನ್ನು ನಾವು ಕಾಣಬಹುದು. ಒಂದು ಉಪಕರಣವನ್ನು ಬಡಗಿ ಮಾಡಿಕೊಟ್ಟರೆ ಇತರೆ ಜಾತಿ ವೃತ್ತಿಗಾರರು ಅವರವರ ವೃತ್ತಿಯಿಂದ ತಯಾರಿಸುವ ವಸ್ತುಗಳನ್ನು ಪಡೆಯುತ್ತಿದ್ದರು, ಪಡೆಯುತ್ತಾರೆ. ಹಣದ ಚಲಾವಣೆ ಕಡಿಮೆ ಇದ್ದಂತಹ ಕಾಲದಲ್ಲಿ ಕೊಡುಕೊಳ್ಳುವಿಕೆಗಳು ನಮ್ಮ ಸಮಾಜದಲ್ಲಿ ಅನಿವಾರ್ಯವಾಗಿದ್ದವು ಆದ್ದರಿಂದ ಇತರ ಕೋಮುಗಳ ಜೊತೆ ಒಪ್ಪಂದಗಳನ್ನು ಬಡಗಿ ಮಾಡಿಕೊಂಡಿದ್ದನು.

**ಸಾಮಾಜಿಕ ಬದಲಾವಣೆಗಳು :**

ಕಾಲ ಬದಲಾದಂತೆ ಸಾಮಾಜಿಕ ನೀತಿಯು ಕೂಡ ಬದಲಾಗುತ್ತಿದೆ. ಕಾರಣ ಆದುನಿಕ ಗಾಳಿ ಬೀಸಲಾರಂಭಿಸಿದ ಮೇಲೆ ಈ ಸಮುದಾಯ ಹಿಂದೆ ಅನುಸರಿಸುವ ಕಟ್ಟು ಪಾಡುಗಳನ್ನು ಬಿಡಬೇಕಾಯಿತು.

ವೇದೋತ್ತರ ಕಾಲದಲ್ಲಿ ಬ್ರಾಹ್ಮಣರ ತಂತ್ರದ ಕಾರಣವಾಗಿ ಅನುಭವಿಸಿದ ಸೋಲು ಅಥವಾ ಅಘಾತದಿಂದ ಇವತ್ತಿಗೂ ಈ ಪಂಚಾಳರು ಮೇಲೆರಲು ಸಾಧ್ಯವಾಗಿಲ್ಲ. ಹಾಗಾಗಿಯೇ ಈ ದೇಶ ಯಾವುದೇ ಪ್ರಧಾನ ಜಾತಿಯ ಜೊತೆಗೂ ಅದು ಪೂರ್ಣವಾಗಿ ಬೆರೆಯಲು ಸಾಧ್ಯವಾಗಿಲ್ಲ. ಹಾಗೆಯೇ ನಾವು ಶ್ರೇಣಿಗಳಲ್ಲಿ ಗುರ್ತಿಸಿಕೊಳ್ಳಲಿಕ್ಕು ಸಾಧ್ಯವಾಗಿಲ್ಲ. ನಾವು ಹಿಡಿ ಜಗತ್ತಿನ ಮೂಲ ಬ್ರಾಹ್ಮಣರು ಎಂಬ ಭ್ರಮೆ ಇದೆ.

೨೧ನೇ ಶತಮಾನದಲ್ಲಿ ಪಂಚಾಳ ಸಮಾಜವನ್ನು ವ್ಯಾಖ್ಯಾನ ಮಾಡುವಾಗ ಚಾರಿತ್ರ್ಯಕವಾದ ಸೋಲನ್ನು ಗಮನಿಸಿದರೆ ನಮ್ಮ ಭಾರತೀಯ ಚರಿತ್ರೆ ಒಳಗೆ ಆಗಿರುವ ಸೋಲು ಮತ್ತೆ ಸ್ವತಃ ತಾನೆ ಮರೆಯಬೇಕು ಎನ್ನುವ ವಿಸ್ಮೃತಿಗೆ ತನ್ನನ್ನು ತಾನು ಒಳಪಡಿಸಿಕೊಳ್ಳುತ್ತಾನೆ. ಈ ಪೌರೋಹಿತ್ಯ ಮಾಡಿ ಏನು ಮಾಡಲಿ, ಮಂತ್ರಗಳನ್ನೇಳಿ ಏನು ಮಾಡಬೇಕು. ಕಾಳಿಯ ಸ್ತುತಿಯನ್ನು ಮಾಡುತ್ತಾ ಕುಳಿತರೆ ನನ್ನ ಹೆಂಡತಿ ಮಕ್ಕಳ ಗತಿ ಏನು ? ಎನ್ನುವ ಭಾವನೆಗಳಿಂದ ಲೌಖಿಕವಾದ ಘೋರ ಸೋಲಿನಿಂದ ಪಾರಮಾರ್ಥಿಕವಾದ ಈ ದೇವರನ್ನು ಅನಿವಾರ್ಯವಾಗಿ ಮರೆಯಲು ಅಥವಾ ಅದರ ಕಡೆ ಗಮನ ಕಡಿಮೆ ಮಾಡಿದರು. ಆಗಾಗಿ ವೇದ ಕಾಲಿನ ಜ್ಞಾನ ಪರಂಪರೆಯ ಅದು ಮರೆಗೆ ಸರಿಯಿತು. ಬ್ರಾಹ್ಮಣರ ತರ್ಕ ಕುತಂತ್ರದಲ್ಲಿ ಜಾತಿ ಪ್ರದಾನವಾದ ಧಾರ್ಮಿಕ ವ್ಯವಸ್ಥೆ ನಿರ್ಮಾಣವಾಯಿತು. ಅದೊಂದು ರೀತಿ ಬ್ರಾಹ್ಮಣರಿಗೆ ಸೌಲತ್ತುಗಳನ್ನು ಕೊಟ್ಟರೆ ಇವರು ಸೇವಕರು ಎನ್ನುವ ರೀತಿಯಲ್ಲಿ ನೋಡಲು ಕಂಡು ಬರುತ್ತದೆ. ಇವರಲ್ಲಿ ಒಂದು ಭ್ರಮೆ ಇದೆ ನಾವು ವಿಶ್ವದ ನಿರ್ಮಾಪಕರು. ಎಲ್ಲರಿಗಿಂತ ಮೇಲು ಎಂಬ ಭಾವನೆಗಳಿವೆ. ಈ ಭಾವನೆ ಇವರನ್ನು ಪಾತಾಳಕ್ಕೆ ತಳ್ಳಿದೆ.

ವಿಶ್ವಕರ್ಮರು ಹಿಂದೆ ಆಚರಿಸುತ್ತಿದ್ದತಹ ವಿಶೇಷದಿಗಳು ಇಂದು ಕಡಿಮೆಯಾಗುತ್ತಾ ಬಂದಿದೆ. ವೃತ್ತಿಯಿಂದ ಬದುಕಬೇಕು. ಕೃಷಿಕರು ನೀಡಿದ್ದನ್ನು ನಾವು ಉಣ್ಣಬೇಕು ಎಂಬ ಭಾವನೆ ಇಂದು ಮಾಯವಾಗಿದೆ. ನಾವಿಲ್ಲದೇ ನಿಮ್ಮ ಬೇಳೆ ಬೇಯಲ್ಲ, ನಮ್ಮಿಂದಲೇ ನಿಮ್ಮ ಹೊಟ್ಟೆಪಾಡು ನಡೆಯುತ್ತದೆ ಎಂದ ಯಾರಾದರೂ ಹೇಳಿದರೆ ಈಗ ಬಡಗಿಯರು ' ಈ ಊರಲ್ಲ, ಮುಂದ್ಲೂರು . ಈ ಕೆಲಸ ಅಲ್ದೆ ಬೇರೆ ಕೆಲಸ ಹುಟ್ಟಿದ ದೇವರು ಹುಲ್ಲು ಮೇಯಿಸುವುಲ್ಲ. ' ಎಂಬ ಗಾದೆಯಂತೆ ಇಂದು ಯಾರನ್ನು ನೆಚ್ಚಿಕೊಂಡು ಜೀವಿಸುವಂತಿಲ್ಲ. ವ್ಯವಸಾಯ ಉಪಕರಣಗಳು ಮತ್ತು ಗೃಹೋಪಕರಣಗಳು ಬೇಕೆಂದಾಗ ಮಾರುಕಟ್ಟೆಯಲ್ಲಿ ದೊರೆಯುವುದರಿಂದ ಈ ಕೆಲಸ ಮಾಡುವ ಬಡಗಿ ತಾನು ನಗರಗಳಿಗೆ ವಲಸೆ ಹೋಗಿ ದುಡಿದು ಜೀವಿಸುತ್ತಾನೆ. ಅಂದರೆ ಅಂದು ಒಂದು ಸಮುದಾಯವನ್ನು ಇನ್ನೊಂದು ಸಮುದಾಯ ಅವಲಂಬಿಸಿತ್ತು. ಆದರೆ ಇಂದು ಸಾಮಾಜಿಕ ಬದಲಾವಣೆಯಾಗಿದೆ. ವ್ಯವಸ್ಥೆಗಳು ಬದಲಾಗಿವೆ. ಕಾಲ ಬದಲಾದಂತೆ ಅನಿವಾರ್ಯವಾಗಿ ತನ್ನ ಹೊಟ್ಟೆ ಪಾಡಿಗಾಗಿ ಏನಾದರೊಂದು ಕೆಲಸ ಮಾಡಿ ಬದುಕಬಲ್ಲೆ ಎಂಬ ವಿಶ್ವಾಸವನ್ನು ಪಡೆದಿದ್ದಾನೆ. ಕಾಲ ಬದಲಾದಂತೆ ಇವರು ಬದಲಾದರು. ಆದರೆ ಹಿಂದೆ ಇದ್ದಂತಹ ಪರಿಸ್ಥಿತಿಯನ್ನು ಅವಲೋಕಿಸಿದರೆ ಆವತ್ತಿನ

ಕಾಲವೇ ಉತ್ತಮವಾಗಿತ್ತು. ಸಮಾಜದಲ್ಲಿ ಇತರ ಸಮುದಾಯಗಳೊಂದಿಗೆ ಕೊಡು ಕೊಳ್ಳುವಿಕೆಯಿಂದು, ಸುಖ ಶಾಂತಿಯಿಂದ ನೆಮ್ಮದಿಯಿಂದ ಜೀವಿಸುತ್ತಿದ್ದಾರೆ. ಆದರೆ ಸಮಾಜದಲ್ಲಿ ತನ್ನ ಕೆಲವೊಂದು ಬದಲಾವಣೆಗಳನ್ನು ಮನುಷ್ಯ ಮಾಡಿಕೊಂಡಿರುವುದು ಕಂಡು ಬರುತ್ತದೆ.

**ಸಮಕಾಲೀನ ಸವಾಲು - ಸಾಧ್ಯತೆಗಳು :**

★ ಇವರ ಆರ್ಥಿಕ, ರಾಜಕೀಯ ಸಾಮಾಜಿಕವಾಗಿ ಹಿಂದುಳಿದ ಸಮುದಾಯವಾಗಿವೆ. ಇವೆಲ್ಲವುಗಳ ಈ ಸಮುದಾಯಕ್ಕೆ ಸಿಗುವಂತಹ ವ್ಯವಸ್ಥೆಯಾದರೆ ಮಾತ್ರ ಇವರು ಬದುಕಬಹುದು.

★ ಹಿಂದೆ ಆಯ ಪದ್ದತಿ ಇದ್ದುದರಿಂದ ಇವರ ಜೀವನಕ್ಕೆ ತೊಂದರೆ ಇರಲಿಲ್ಲ. ಆದರೆ ಇಂದು ಈ ಪದ್ದತಿ ಮಾಯವಾಗಿದೆ. ಅದಕ್ಕೆ ಪರ್ಯಾಯವಾಗಿ ಇವರು ನಗರಗಳಿಗೆ ವಲಸೆ ಹೋಗುತ್ತಿರುವುದು ಸಾಮಾನ್ಯವಾಗಿದೆ.

★ ಆರ್ಥಿಕವಾಗಿ ಹಿಂದುಳಿದವರಿಂದ ಮರಗಳನ್ನು ಕೊಂಡುಕೊಳ್ಳುವುದು ಇಂದು ಅಸಾಧ್ಯದ ಮಾತು. ಏಕೆಂದರೆ ಅವು ಶ್ರೀಮಂತರ ಪಾಲಾಗುತ್ತಿರುವುದು ದುರಂತ. ಇವರ ಹತ್ತಿರ ಬಂಡವಾಳವಿಲ್ಲದೆ ಕೆಲಸವಿಲ್ಲದೆ ನಿರಾಸಕ್ತಿ ಹೊಂದಿದ್ದಾರೆ. ಸರ್ಕಾರ ಅವರಿಗೆ ಅಂತಹ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕು.

★ ಕೈಗಾರಿಕರಣದ ನಿಲುವಿನಿಂದಾಗಿ ಇವರ ವೃತ್ತಿಗಳು ಕ್ಷೀಣಿಸುತ್ತಾ ಬಂದಿವೆ. ದೇಶೀಯ ತಂತ್ರಜ್ಞಾನಗಳಿಗೆ ಜನರು ಹೆಚ್ಚು ಒತ್ತು ಕೊಟ್ಟು ಅವುಗಳನ್ನು ಉಪಯೋಗಿಸುವುದರಿಂದ ಈ ಸಮುದಾಯಗಳು ಸುಧಾರಿಸಬಹುದು.

★ ಬಡಗಿ ವೃತ್ತಿಯನ್ನೇ ಇಂದು ಹೀನ ದೃಷ್ಟಿಯಿಂದ ಆ ವೃತ್ತಿಗಾರರೆ ನೋಡುವುದರಿಂದ ಇತರರು ಅದೇ ದೃಷ್ಟಿಯಿಂದ ನೋಡುವಂತಾಗಿದೆ. ಆ ಭಾವನೆಯನ್ನು ಮೊದಲು ತಾವೇ ಕಿತ್ತೊಗೆಯಬೇಕು.

★ ಇತರ ಸಮುದಾಯಗಳು ಕೂಡ ಈ ವೃತ್ತಿಯನ್ನು ಮಾಡುವುದರಿಂದ ಇವರ ಪ್ರಾಮುಖ್ಯತೆ ಕಡಿಮೆಯಾಗುತ್ತಾ ಬರುತ್ತಿದೆ. ಅದು ಈ ಬಡಗಿಗಳಿಗೆ ದುರಂತವಾಗಿದೆ.

★ ಇತರ ಕೋಮುಗಳಿಂದ ಮಾಡಿಕೊಂಡ ಒಪ್ಪಂದಗಳು ಮುರಿದು ಬಿದ್ದಿವೆ.

★ ಸಾಮಾಜಿಕ ಆಚಾರ - ವಿಚಾರಗಳು ಕೂಡ ಬದಲಾಗಿವೆ.

ಈ ಎಲ್ಲಾ ಸಾಮಾಜಿಕ ಬದಲಾವಣೆಯ ಸಮಕಾಲೀನ ಸವಾಲು ಮತ್ತು ಸಾಧ್ಯತೆಗಳನ್ನು ವಿವರಿಸಬಹುದು. ಈ ಸಮುದಾಯದ ಇತಿಹಾಸ ಈಗ ಮೂಲೆಗುಂಪಾದಾಗಿದೆ. ಅದನ್ನು ತಾವೇ ಮತ್ತು ಇತರರು ಕೂಡ ಅದನ್ನೇ ಉಳಿಸಿಕೊಂಡು ಬಂದಿರುವುದು ಸ್ವಾಗತಾರ್ಹ. ಕಾಲ ಕಾಲಕ್ಕೆ ಬದಲಾವಣೆಗಳು ಆಗುವುದುಂಟು. ಅದು ಅನಿವಾರ್ಯವಾದರೂ ತಮ್ಮ ಮೂಲ ಕಸುಬನ್ನು ಈ ಪಂಚಾಳರಲ್ಲಿ ಬಡಗಿಯು ಸಾಮಾಜಿಕ ಬದಲಾವಣೆಯೊಂದಿಗೆ ಅದಕ್ಕೆ ತಕ್ಕಂತೆ ತಾನು ಬದಲಾಗಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ.

**೫.೫. ಈ ಸಮುದಾಯದ ಆಚರಣೆಗಳು:**

ನಮ್ಮ ಸಮಾಜ ಮತ್ತು ಸಮುದಾಯ ಒಂದು ನಾಣ್ಯದ ಎರಡು ಮುಖಗಳಿಂದ್ದಂತೆಹಾಗೆಯೇ ಬಡಗಿ ಮತ್ತು ಸಮಾಜ ಪಾಂಚಾಳರು ತನ್ನ ನೆಲೆಯನ್ನು ಸಮಾಜದಲ್ಲಿ ಜೀವಿಸುತ್ತಿದ್ದಾನೆ ಎಂಬ ವಿಷಯ ಮುಖ್ಯ. ಅವರ ಸ್ಥಾನಮಾನ ಜೊತೆ ಬಡಗಿತನ ವೃತಿಯಾದ ರೀತಿ ಸಮಾಜ ಅವಲಂಬಿತವಾಗಿತ್ತು ಎಂಬ ಅಂಶ ನಮಗೆ ಕಂಡುಬರುತ್ತದೆ. ಬಡಗಿಯರು ಇತರ ಎಲ್ಲ ಸಮುದಾಯಕ್ಕೂ ಬೇಕಾದ ವ್ಯಕ್ತಿಗಳು ಅಥವಾ ಸಮುದಾಯ.

ಬಡಗಿ ತಾವು ಮಾಡುವ ಉಪಕರಣಗಳನ್ನು ತಾವೇ ನಿರ್ಮಿಸಿಕೊಳ್ಳುತ್ತಾರೆ. ಆದರೆ ಇತರ ಸಮುದಾಯದವರು ಕುಶಲಕರ್ಮಿಗಳಿಗೆ ಬಡಗಿಯ ಅವಿನಾಭಾವ ಸಂಭಂದ ಹೊಂದಿರುತ್ತಾರೆ. ಯಾಕೆಂದರೆ ಎಲ್ಲಾ ಇವರು ಮದ್ಯಮವರ್ಗಕ್ಕಿಂತ ಕೆಳವರ್ಗದಲ್ಲಿದ್ದರೂ ಆಚಾರ ವಿಚಾರಗಳಲ್ಲಿ ಮೇಲುಗೈ. ಇವರು ತಮ್ಮವರೇ ತಯಾರಿಸಿದ ಆಹಾರವನ್ನು ಉಣ್ಣುತ್ತಾರೆ. ಕೆಲವರು ಎಲ್ಲಿ ಬೇಕೂ ಅಲ್ಲಿ ಕುಡಿಯುವುದು ತಿನ್ನುವುದು ಮಾಮೂಲಾಗಿದೆ. ಆದರೆ ಇವರು ತಮ್ಮ ಮೂಲ ಸಂಪ್ರಾದಾಯವನ್ನು ಮರೆತಿರುವಂತಿರುತ್ತಾರೆ. ಯುವ ಪೀಳಿಗೆಯಂತೂ ಯಾವುದರಲ್ಲಿ ಯಾರಿಗೂ ಕಡಿಮೆ ಇಲ್ಲ ಎನ್ನುವಂತಿರುತ್ತಾರೆ. ಪಂಛಾಳರು ಊಟಮಾಡುವ ಪದ್ದತಿಯೇ ಇತರರಿಗಿಂತ ವಿಭಿನ್ನವಾಗಿರುತ್ತಾರೆ. ತಮ್ಮ ಮನೆಯುವರು ಎಲ್ಲರೂ ಸೇರಿ ಒಟ್ಟಿಗೆ ಊಟಮಾಡುತ್ತಾರೆ. ಹಬ್ಬ ಹರಿದಿನ ಸಭೆ ಸಮಾರಂಭದ ದಿನಗಳಲ್ಲಿ ತಮಗೆ ಬೇಕಾದುದ್ದರನ್ನು ಊಟಕ್ಕೆ ಕರೆಯುತ್ತಾರೆ. ಈ ಊಟ ಮಾಡುವ ಪದ್ದತಿಯನ್ನು ಇತರರು ನೋಡಿ ಸಂಕೊಚಿಸಿದ್ದು ಉಂಟು. ಇಲ್ಲಿ ಒಂದು ಸನ್ನಿವೇಶ ನೆನಪಿಗೆಬರುತ್ತದೆ. ನಮ್ಮ ಮನೆಯಲ್ಲಿ ನಮ್ಮ ತಂಗಿ ಮಗಳ ತೊಟ್ಟಿಲು ಕಾರ್ಯ ಕ್ರಮ ಇತ್ತು. ಪೂಜೆ ಹೆಸರಿಡುವ ಪದ್ದತಿಗಳು ಮುಗಿದು ನಮ್ಮ ಮನೆಯವರು ಜೀಗರು ಊಟ ಮಾಡಿದಾಗ ಆಮೇಲೆ ನಮ್ಮ ತಾಯಿ 'ಲೊ, ವಾ ಸ ' ನಿಮ್ಮ ಗೆಳೆಯರನ್ನು ರಾತ್ರಿ ಊಟಕ್ಕೆ ಕರೆದುಕೊಂಡು ಬಾ ಎಂದರು 'ಊನವ್ವ' ಎಂದು ಎಲ್ಲಾ ಹುಡುಗರನ್ನು ರಾತ್ರಿ ಕರೆದು ಕೊಂಡು ಬಂದು ಕೈ ತೊಳೆಯಲು ನೀರು ಕೊಟ್ಟೇನು. ಎಲ್ಲರನ್ನು ಪಡಸಾಲೆಯಲ್ಲಿ ಕೂಡಿಸಿದೆ . ಅವರ ನಮ್ಮ ಜೊತೆಯಲ್ಲಿ ನೀನು ಕುಂದ್ರು ಎಂದರು. ನಾನು ಕುಳಿತೆ ಬಾಳೆ ಎಲೆ ಹಾಕಿದರು , ನೀರು ತುಂಬಿಕ್ಕಿದರು. ಕಾಯಿಪಲ್ಯ, ಕೊಸಂಬರಿ, ಉಪ್ಪಿನಕಾಯಿ, ಬಡಿಸಿದರು. ನಂತರ ಎಲ್ಲರಿಗೂ ಹಿಡಿಯಷ್ಟು ಅನ್ನ ಸಾರು ಬಡಿಸಿದರು, ಊಟಮಾಡು ಎಂದೆ ಎಲ್ಲರೂ ಮುಖ-ಮುಖನೋಡಿ ಕೊಳ್ಳತೊಡಗಿದರು. ನನಗೆ ಅಂತ ಪ್ರಸಂಗಗಳನ್ನು ಬೇರೆ ಕಡೆ ನೋಡಿದ್ದೆ. ಅವರ ಮುಖಗಳನ್ನು ನೋಡಿ , ಲೇ ನಮ್ಮ ಮನೆಯಲ್ಲಿ ಸಿಹಿ ಊಟ ಮಾಡುವದಕ್ಕಿಂತ ಮೊದಲು ಅನ್ನ ಊಟಮಾಡುತ್ತೇವೆ. ನಂತರ ಸಿಹಿ ಆದ ಮೇಲೆ ಎಷ್ಟು ಬೇಕೋ ಅಷ್ಟು ಅನ್ನ . ಈ ಪದ್ದತಿ ಹಿಂದಿನಿಂದ ಬಂದಿದೆ. ಹೀಗೂ ಕೂಡ ನೆಡೆಸುತ್ತೇವೆ ಎಂದೆ. ಊಟ ಮಾಡಿದ ಎಲ್ಲಾರೂ ಜೊತೆಗೆ ಬಂದು ವಾಸರ ಮನೆಗೆ ಊಟಕ್ಕೆ ಬರಬೇಕಲೇ ಒಂದು ರೀತಿ ಮಜಾ ಇರುತ್ತದೆ ಎಂದು ಬಿಟ್ಟಿದ್ದರು. ಅಂದರೆ ಮೊದಲಿಗೆ ಅನ್ನ ಊಟಮಾಡಿದ ಮೆಲೇ ಸಿಹಿ ಊಣ್ಣುವ ಪದ್ದತಿಯನ್ನು ನಾವು ಕಾಣಬಹುದು. ಇತರ ಸಮುದಾಯದವರು ಶುಭ ಅಶುಭದಿನದ ಕಾರ್ಯಕ್ರಮಗಳಿಗೆ ಬೇಕಿದ್ದವರನ್ನು ಅಂದರೆ ಪುರೋಹಿತರನ್ನು ಅಥವಾ ಸ್ವಾಮಿಗಳನ್ನು ಕರೆಯುತ್ತಾರೆ. ಈ ಬಡಗಿಯರು ಅವರ ಜನಾಂಗದ ಪುರೋಹಿತರೇ ಆಗಿರುತ್ತಾರೆ ಸತ್ತಾಗ ಅಥಾವ ಹೆರಿಗೆಯಾದಾಗ ಹೆಣ್ಣುಮಕ್ಕಳು ಋತುಮತಿಯಾದಾಗ ಹೊಲಿಮನಿ (ಮೈಲಿಗೆ) ಬರುತ್ತದೆ. ಐದುದಿನ ಅಥವಾ ಹನ್ನೊಂದು ದಿನದಂದು ಶುದ್ಧವಾಗುವ ಕಾರ್ಯಕ್ರಮ ಇರುತ್ತದೆ. ಎಂಟು ವರ್ಷದಿಂದ ಹದಿನಾಲ್ಕು ವರ್ಷಗಳ ಒಳಗೆ ಗಂಡು ಹುಡುಗರಿಗೆ ಉಪನಯನ ಮಾಡುತ್ತಾರೆ. ಇದು ಇವರ ಆಚರಣೆಯಲ್ಲಿ ಬಹುಮುಖ್ಯವಾದ ಘಟ್ಟ. ಈ ಸಂದರ್ಭದಲ್ಲಿ ತೆಲೆ ಬೋಳಿಸಿ ಜುಟ್ಟು ಬಿಟ್ಟಿರುತ್ತಾರೆ . ನಾಲಿಗೆಯನ್ನು ಉತ್ರಾಣಿಕಡಿಯಿಂದ ಸುಟ್ಟು ಅವರನ್ನು ಶುದ್ದ ಮಾಡುತ್ತಾರೆ. ಮೂರು ಎಳೆಯ ಜನಿವಾರ ಹಾಕಿ ಕಿವಿಯಲ್ಲಿ ಆಚಾರಿಗಳು ದಿನ ಸ್ನಾನಾದಿ ಪೂಜೆಯನ್ನು ಮಾಡಿ ಊಟ ಮಾಡಬೇಕು. ನಿಸ್ನ ಕೆಲಸದ ಉಪಕರಣಗಳಿಗೆ ದ್ರೋಹ ಬಗೆಯಬಾರದು ದೊಡ್ಡವರಿಗೆ ಎದುರುತ್ತರ ಕೊಡಬಾರದು ಎಂದು ಬೋದಿಸುತ್ತಾರೆ . ಈ ಕಾರ್ಯಕ್ರಮ ಆದರೆ ಅರ್ಧಮದುವೆ ಆದಂತೆ . ಉಪನಯನ ಇಲ್ಲದೇ ಯಾವ ಮದುವೆಯಾಗುವಂತಿಲ್ಲ ಮದುವೆ ಆದ ಮೇಲೆ ಆರು ಎಳೆಯ ಜನಿವಾರ ಧರಿಸುತ್ತಾರೆ.

★ ವಿಧವಾ ವಿವಾಹ ಇವರಲ್ಲಿ ನಿಷೇದ ಈಗ ಈ ನಿಷೇದ ಸಡಿಲಹೊಂದಿದೆ.

★ ಬಹು ಪತ್ನಿತ್ವ ಇದರಲ್ಲಿ ಬೆರಳೆಣಿಕೆಯಷ್ಟು.

★ ಅಂತರ್ಜಾತಿ ವಿವಾಹ ನಿರ್ಭಂದ.

★ ಬಾಲ್ಯ ವಿವಾಹ ಪ್ರಚಲಿತ ಇತ್ತು ಈಗ ಕಡಿಮೆ.

★ ಇವರು ಆರಾದಿಸುವ ಪ್ರಮುಖ ದೇವ-ದೇವತೆಗಳು ಕಾಳಿಕಾ, ಮೌನೇಶ, ವೀರಭದ್ರ, ನಾಗಲಿಂಗ, ಇತರ ದೇವರ ಆರಾಧಕರು.

★ ಗೋತ್ರ ಬದಲಾದರೆ ವಿವಾಹ . ಒಂದೇ ಆದರೆ ಅಣ್ಣ ತಮ್ಮಂದಿರು ಎಂದು ನಂಬಿಕೆ ಬೆಳೆದುಕೊಂಡು ಬಂದಿದೆ.

★ ವಿಶ್ವಕರ್ಮ ಜನಾಂಗದಲ್ಲಿ ಹಿರೆಮನೆರು ಚಿಕ್ಕಮನೇರು ಎಂಬ ವರ್ಗಗಳಿವೆ ಇವೆರಡು ವೈವಾಹಿಕ ಸಂಬಂಧಗಳು ನೆಡೆಯುವುದಿಲ್ಲ .

★ ಇವರು ಸಸ್ಯಹಾರಿಗಳು. ಆದರೆ ಇಂದಿನ ಕೆಲಜನರು ಮಾಂಸವನ್ನು ಕದ್ದು ಮುಚ್ಚಿ ತಿನ್ನುತ್ತಿರುವುದು ಕಂಡು ಬರುತ್ತದೆ.

★ ಬೇರೆಯವರ ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಆದರೆ ಇಂದು ಬಹಳ ಸಡಿಲಗೊಂಡಿದೆ.

ಹೀಗೆ ಇವರು ಆಚರಣೆಗಳು ಮತ್ತು ನಂಬಿಕೆಗಳನ್ನು ಬೆಳೆಸಿಕೊಂಡು ಕೆಲವೊಂದು ಬದಲಾವಣೆ ಮಾಡಿಕೊಂಡು ಬದಿದ್ದಾರೆ ಇವರು ಸಮಾಜದಲ್ಲಿ ಒಂದು ಸ್ಥಾನ ವಿದೆ ಎಂದು ತಮ್ಮ ಮನಸ್ಸನ್ನು ಭಾವಿಸಿರುತ್ತಾರೆ. ಆದರೆ ಇವರು ಅತಂತ್ರ ಸ್ಥಿತಿಯಲ್ಲಿದ್ದೇವೆ ಎಂಬುದು ತಮಗೆ ಗೊತ್ತಿಲ್ಲ . ಸಮಾಜದಲ್ಲಿ ಇವರನ್ನು ಕೀಳು ಮಟ್ಟದಲ್ಲಿ ನೋಡುವ ಸ್ವಭಾವ ಇದೆ. ಅವರು ಕುಡಿದ ನೀರನ್ನು ಕುಡಿಯಬಾರದು ಎಂಬ ವಿರೋಧವನ್ನು ಎಂದು ಮರೆಯಾಲಾಗದಂತ ಸನ್ನಿವೇಶಕ್ಕೆ ಉದಾಹರಣೆ. ನಾನು ಮತ್ತು ನಾನ್ನ ಗೆಳೆಯರು B. A. Final ನಲ್ಲಿ ಓದುತ್ತಿರುವಾಗ ನಮ್ಮೂರಲ್ಲೇ ಒಂದು ರೂಂ ಬಾಡಿಗೆ ಹಿಡಿದಿದ್ದೆವು. ಆ ರೂಮಿನ ಒಡತಿ ಮಯಸ್ಸಾದ ಮುದುಕಿ ಬಣಜಿಗರು. ಆಗಾಗ ನಮ್ಮ ಹತ್ತಿರ ಬಂದು ಮಾತಾಡುತ್ತಾ ವಚನ, ಜನಪದ ಕತೆ ,ಗೀತೆಗಳನ್ನು ಹೇಳುತ್ತಾ ನಮ್ಮನ್ನು ಸಂತೋಷದ ಜೊತೆಗೆ ತೆಲೆಬಿಸಿಮಾಡುತ್ತಿದ್ದರು. ನಮ್ಮ ಗೆಳೆಯ ಬಾಟಲಿನಲ್ಲಿ ನೀರು ತಂದ . ನಾನು ಮತ್ತು ಇನ್ನೊಬ್ಬ ಗೆಳೆಯನು ಕೈಚಾಚಿದೆವು. ನನಗೆ ಮೊದಲು ಸಿಕ್ಕಿತು ,ಮುಚ್ಚುಳವನ್ನು ತೆರೆದು ಬಾಯಲ್ಲಿ ಹಾಕಿಕೊಳ್ಳುತ್ತಿದ್ದೆ . ಆ ಮುದುಕಿ ಆ ಬಾಟಲನ್ನು ಹಿಡಿದು ಮೊದಲು ಅವನು ಕುಡಿಲಿ ಆಮೇಲೆ ನೀನು ಕುಡಿಯುವಂತಿ ಎಂದಳು. ನನಗೆ ಮನಸ್ಸಿಗೆ ಸೂಜಿ ಸುಚ್ಚಿದಂತೆ ಆಯಿತು. ಆದರೆ ನೀರನ್ನು ಮಾತ್ರ ನಾನೇ ಮೊದಲು ಕುಡಿದೆ. ಆ ಮುದುಕಿ ಈ ನೀರು ಕುಡಿಬಾರದು ಎಂದು ಕುಡಿಯುದವುನ್ನು ಬಿಡಿಸಿದ್ದಳು. ಇಂತಹ ಭಾವನೆಗಳ ಕೂಡ ಸಮಾಜದಲ್ಲಿ ಗೊತ್ತಿಲ್ಲದೆ ಎಷ್ಟೊ ನೆಡೆಯುತ್ತವೆ.

ಈ ರೀತಿಯಾದಂತ ಭಾವನೆಗಳಿದ್ದರೂ, ಇವರು ಸಮಾಜದಲ್ಲಿ ಉನ್ನತ ಸ್ಥಾನದಲ್ಲಿದ್ದೇವೆಂದು ಜೀಗುತ್ತಿರುತ್ತಾರೆ. ಇವರ ಆಚಾರ ವಿಚಾರಗಳು ಈಗ ಇತಿಹಾಸ . ವರ್ತಮಾನದಲ್ಲಿ ಬ್ರಾಹ್ಮಣರು ಅನುಸರಿಸುತ್ತಿರುವುದು ನಮಗೆಲ್ಲ ಗೊತ್ತು.

# ೬. ಬಡಗಿತನ ಮತ್ತು ಕೃಷಿ ಆರ್ಥಿಕತೆ

ಪ್ರಾಚೀನ ಕಾಲದಿಂದ ಭಾರತದಲ್ಲಿ ಬಹಳಷ್ಟು ಜನರು ಇಂದಿಗೂ ಕೃಷಿಯನ್ನು ಜೀವನೋಪಾಯವನ್ನು ಅವಲಂಬಿಸಿದ್ದಾರೆ. ಭಾರತದ ಆರ್ಥಿಕ ವ್ಯವಸ್ಥೆಯ ಮೇಲೆ ಕೃಷಿ ಎಷ್ಟು ಪ್ರಭಾವ ಬೀರಿದೆ ಎಂದರೆ ದುಡಿಯುವ ಜನಸಂಖ್ಯೆಯಲ್ಲಿ ಬಹಳ ಹೆಚ್ಚಿನ ಪಾಲು ಜನರು ಕೃಷಿಯಲ್ಲಿ ನಿರತರಾಗಿದ್ದಾರೆ. ೧೯೯೧ರ ಜನಗಣತಿಯ ಪ್ರಕಾರ ಒಟ್ಟು ದುಡಿಯುವ ಸಂಖ್ಯೆಯಲ್ಲಿ ಶೇಕಡಾ ೬೭ ರಿಂದ ೬೯ ರಷ್ಟು ಜನರು ಕೃಷಿ ವಲಯದಲ್ಲಿ ನಿರತರಾಗಿದ್ದಾರೆ.

ಕೃಷಿಯು ರಾಷ್ಟ್ರದ ವರಮಾನದ ಪ್ರಮುಖ ಮೂಲವಾಗಿ ನಮ್ಮ ವಾರ್ಷಿಕ ವರಮಾನದ ಶೇಕಡಾ ೩೨ ರಷ್ಟು ಭಾಗವು ಕೃಷಿಯಿಂದ ಸಂಗ್ರಹವಾಗುತ್ತದೆ. ಅಲ್ಲದೇ ಕೃಷಿಯು ಸರ್ಕಾರದ ಪ್ರಮುಖ ಆದಾಯದ ಮೂಲವಾಗಿದೆ. ವ್ಯವಸಾಯವನ್ನು ಕಂಡು ಕೊಂಡಾಗಿನಿಂದ ಹಿಡಿದು ಇಲ್ಲಿಯ ವರೆಗೂ ಕೃಷಿಯನ್ನು ಮತ್ತು ಕೃಷಿ ಕಾರ್ಮಿಕರು ಜೀವನ ಮಾಡುತ್ತಾ ಬಂದಿದ್ದಾರೆ. ಇಲ್ಲಿ ೧೮-೧೯ ರಷ್ಟು ಜನರು ಬಡಗಿತನ, ಕುಂಬಾರಿಕೆ, ನೇಕಾರಿಕೆ, ಪೌರೋಹಿತ್ಯ, ಇತ್ಯಾದಿ ಗುಡಿ ಕೈಗಾರಿಕಾ ವೃತ್ತಿಗಳನ್ನು ಅವಲಂಬಿಸಿ ಕೊಂಡಿರುವವರು ಕೃಷಿ ಪ್ರದಾನವಾದ ದೇಶವಾದ್ದರಿಂದ ಭೂಮಿಗೆ ಮಹತ್ವ ಹೆಚ್ಚು. ಈ ಭೂಮಿ ಯ ಒಡೆಯನಾದ ರೈತನನ್ನು ಕೇಂದ್ರವಾಗಿಟ್ಟುಕೊಂಡು ಉಳಿದ ವೃತ್ತಿಗಳು ರೂಪಗೊಂಡಿರುತ್ತವೆ. ರೈತ ಕುಟುಂಬ ಎಲ್ಲರಿಗೂ ಬೇಕಾದ ಆಹಾರ ಉತ್ಪಾದಿಸಿದರೆ ಈ ರೈತ ಕುಟುಂಬಕ್ಕೆ ಸರಕುಗಳನ್ನು ಸೇವೆಯನ್ನು ಉಳಿದ ಕುಟುಂಬಗಳು ಅಂದರೆ ಕೈ ಕಸಬಿನವರಿಗೆ ಸಲ್ಲುತ್ತದೆ.

ಚಮ್ಮಾರನು ಮೆಟ್ಟು ಚರ್ಮದ ಪಟ್ಟಿಯನ್ನು ಮಾಡಿಕೊಟ್ಟರೆ ಕುಂಬಾರನು ಅಡಿಗೆಗೆ ಬೇಕಾದ ಮಡಿಕೆಗಳನ್ನು ಹಬ್ಬ ಹರಿದಿನಗಳಲ್ಲಿ ಹಚ್ಚುವ ಮಣ್ಣಿನ ಹಣತೆಗಳನ್ನು ಮಾಡಿ ಕೊಡುತ್ತಾರೆ. ಕ್ಷೌರಿಕನು ತಲೆಗೂದಲು ತೆಗೆಯುವ ಸೇವೆ ಮಾಡಿದರೆ, ಊರಿನ ಅಗಸನು ಮಂಗಳ, ಅಮಂಗಳ ಸಂದರ್ಭಗಳಲ್ಲಿ

ಬಟ್ಟೆಗಳನ್ನು ಮಡಿ ಮಾಡಿ ಕೊಡುತ್ತಾನೆ. ಮದುವೆ, ಮುಂಜೆಗಳಲ್ಲಿ ಚಪ್ಪರಕ್ಕೆ ಬಟ್ಟೆ ಕಟ್ಟಿ ಅಲಂಕರಿಸುತ್ತಾನೆ. ಜಂಗಮಯ್ಯ ಅಥವಾ ಊರಿನ ಪುರೋಹಿತರು ಮದುವೆ ಮುಂಜೆ, ಹಬ್ಬ ಹರಿದಿನಗಳಲ್ಲಿ ನಾಮಕರಣ ಮುಂತಾದ ದಿನಗಳಲ್ಲಿ ವಿಶೇಷ ದಿನಗಳಲ್ಲಿ ಕುಟುಂಬಕ್ಕೆ ಧರ್ಮ ಕಾರ್ಯದಲ್ಲಿ ಸಹಾಯ ಮಾಡುತ್ತಾನೆ. ಅದರಂತೆ ಬಹು ಮುಖ್ಯವಾಗಿ ರೈತರಿಗೆ ಊರುಗೋಲಾಗಿರುವ ಬಡಗಿಯರು ರೈತರಿಗೆ ಬಾರಿಕೋಲಿನಿಂದ ಹಿಡಿದು ಕೊಡ್ಲಿ ಕಾವು, ಸೆಲ್ಕಿ, ಗುದ್ದಲಿ ಮೊದಲ್ಗೊಂಡು, ಕೂರುಗಿ ಕುಂಟೆ, ಮೇಟಿಗಾವ, ಕೂರಿಗಿ, ಕೀಲು, ತಾಳುಗಳು, ಈಸು (ಈಚು) ನೇಗಿಲುಗಳವರೆಗೆ ಮತ್ತು ಬಂಡಿ ಎತ್ತುಗಳ ಕೊಳಕಣ್ಣಿಗಳವರೆಗೂ, ಕುಡುಗೋಲು ಕುರ್ಚಿ, ದನ ಕಟ್ಟುವ ಗೂಟ, ಗೊಟ್ಟದ ಸಮೇತ ಮತ್ತು ಮನೆ ಕಟ್ಟುವದರಿಂದ ಹಿಡಿದು ಮನೆಯಲ್ಲಿ ಬಳಸುವ ಗೃಹೋಪಕರಣಗಳವರೆಗೂ ಬಡಗಿಯರು ರೈತರಿಗೆ ಬೆನ್ನೆಲುಬಾಗಿದ್ದಾರೆ.

"ದೇಶದ ಬೆನ್ನೆಲೆಬು ರೈತ, ರೈತನ ಬೆನ್ನೆಲುಬು ಬಡಗಿ" ಎಂಬ ಗಾದೆಯನ್ನು ನಾವು ನೋಡಬಹುದು. ಕೃಷಿಯಿಂದಲೇ ಆರ್ಥಿಕ ಪ್ರಗತಿ ಸಾಧ್ಯ. ಕೃಷಿಗೆ ಮೂಲ ಪ್ರೇರಣೆ ಬಡಗಿತನ, ಕೃಷಿಯು ಸರಿಯಾಗಿ ಸಾಗಿದರೆ ಮಾತ್ರ ಕೃಷಿ ಆರ್ಥಿಕತೆ ಸಾಧ್ಯ. ಕೃಷಿ ಸರಿಯಾಗಿ ಸಾಗಬೇಕಾದರೆ ಅದಕ್ಕೆ ಬೇಕಾದ ಕೃಷಿ ಉಪಕರಣಗಳು ಉತ್ತಮವಾಗಿರಬೇಕು. ಈ ಉಪಕರಣ ತಯಾರಾಗಬೇಕಾದರೆ ಬಡಗಿಯರು ಎಂದ ಮೇಲೆ ಬಡಗಿತನವು ಕೃಷಿ ಆರ್ಥಿಕತೆ ಬೆಳೆಯಲು ಸಾಧ್ಯವಾಗಿದೆ.

ಆಗ ವಸ್ತು ವಿನಿಮಯ ಪದ್ಧತಿ ಇದ್ದುದರಿಂದ ರೈತ ಮತ್ತು ಬಡಗಿಯರು ಒಂದು ನಾಣ್ಯದ ಎರಡು ಮುಖ ವಿದ್ದಂತಿದ್ದರು. ಅವರು ಬೆಳೆದ ಧಾನ್ಯಗಳನ್ನು ಬಡಗಿಯರಿಗೆ ಮತ್ತು ಇತರರಿಗೂ ವರ್ಷಕ್ಕೆ ಇಂತಿಷ್ಟು ಎಂದು ಕೊಡುತ್ತಿದ್ದರು. ಅದಕ್ಕೆ ಆಯ, ಆಯಗಾರರು ಎಂದು ಕರೆಯುತ್ತಾರೆ.

ಬಡಗಿಯರು ಅವಲಂಬಿಸಿರುವುದು ವೃತ್ತಿ ಬಡಗಿತನ ಹಳ್ಳಿ ನೆರೆ ಹೊರೆಗಳಲ್ಲಿ ತಮ್ಮ ಹೊಲಗಳಲ್ಲಿ ಸಿಕ್ಕುವ ಗಿಡ ಮರಗಳನ್ನು ಕಡಿದು ಕೃಷಿಕರು ತಂದು ಕೊಟ್ಟು ಕಟ್ಟಿಗೆಯಲ್ಲಿ ಅವರಿಗೆ ಬೇಕಾದ ಕೃಷಿ ಉಪಕರಣಗಳನ್ನು ನಿರ್ಮಿಸಿಕೊಡುವುದು ಇವರ ಮುಖ್ಯ ಕಸಬು. ಇದಕ್ಕೆ ಪ್ರತಿಯಾಗಿ ಬೆಳೆದ ಕಾಳು ಕಡಿಯನ್ನು ಪಡೆದು ಜೀವನೋಪಾಯ ಮಾಡುತ್ತಿದ್ದರು.

ಇಲ್ಲಿ ಮುಖ್ಯವಾಗಿ ಚರ್ಚಿಸಬೇಕಾದ ವಿಷಯವೆಂದರೆ ರೈತರು ಅಥವಾ ಕೃಷಿಕರು ತಮ್ಮ ಮೂಲ ವೃತ್ತಿಯನ್ನಾಗಿಸಿಕೊಂಡಿರುವುದು ಕೃಷಿಯನ್ನೇ ಆದರಿಂದಲೇ ಅವರ ಜೀವನೋಪಾಯ ಸಾಗುತ್ತದೆ. ಆದರೆ ವ್ಯವಸಾಯ ಮಾಡಿದರೆ ಅದರಿಂದ ಬಂದ ಬೆಳೆಯನ್ನು ರೈತರು ಆರ್ಥಿಕ ಬೆಳವಣಿಗೆ ಆಗುತ್ತದೆ. ವ್ಯವಸಾಯ ಈ ದೇಶದ ಆರ್ಥಿಕ ಸ್ಥಿತಿಯನ್ನು ತೋರುತ್ತದೆ. ಅದರಂತೆ ರೈತ ವ್ಯವಸಾಯದಿಂದ ಆರ್ಥಿಕ ಬಲ ಬರುತ್ತದೆ ಎಂದರೆ ಕೃಷಿಕ ವ್ಯವಸಾಯಕ್ಕೆ ಬಳಸುವ ಉಪಕರಣಗಳು ಇಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

ಆ ಕೃಷಿ ಉಪಕರಣಗಳಾದ ನೇಗಿಲು, ಕೂರಿಗಿ, ಕುಂಟೆ, ಬಂಡಿ, ಇತ್ಯಾದಿಗಳನ್ನು ತಯಾರಿಸಿ ಕೊಡುವವರು ಈ ಬಡಗಿಯರು. ಅಂದಮೇಲೆ ಬಡಗಿತನದಿಂದ ಕೃಷಿ ಆರ್ಥಿಕತೆಗೆ ಪೂರಕವೆನ್ನಬಹುದು. ಕೃಷಿಯಿಂದಲೇ ಆರ್ಥಿಕ ಪ್ರಗತಿ ಸಾಧ್ಯ ಎಂದ ಮೇಲೆ ಬಡಗಿಯರು ತಯಾರಿಸುವುದರಿಂದಲೇ ರೈತನ ಆರ್ಥಿಕ ಬೆಳವಣಿಗೆಗೆ ಸಹಕಾರಿಯಾಗುತ್ತದೆ ಎಂದರ್ಥ. ಕೃಷಿಕರು ವ್ಯವಸಾಯ ಉಪಕರಣಗಳನ್ನು ಬಳಸದೇ ಇದ್ದರೆ

ಅಥವಾ ಉಪಕರಣಗಳು ಇಲ್ಲದೇ ಇದ್ದಲ್ಲಿ ಇಂದು ಅದು ಯಾವ ಪರಿಸ್ಥಿತಿಯಲ್ಲಿರುತ್ತಿತ್ತು ಅಥವಾ ಆರ್ಥಿಕವಾಗಿ ಪ್ರಬಲನಾಗುತ್ತಿದ್ದನೋ ಇಲ್ಲವೋ.

ಇಂದು ಆಧುನಿಕ ಉಪಕರಣಗಳು ಬಂದಿವೆಯಾದರೂ ಅವು ಮೂಲ ಉಪಕರಣಗಳ ಸ್ವರೂಪಗಳಿಂದಲೇ ಬಂದಂತವುಗಳಾಗಿರುತ್ತವೆ ಎಂಬ ಸಂಶಯವೇ ಇಲ್ಲ. ಅಂದಾಗ ಕೃಷಿ ಆರ್ಥಿಕತೆಯಲ್ಲಿ ಬಡಗಿಯ ಪಾತ್ರ ಇದೆ ಎಂತಲೇ ಅರ್ಥ. ಅವರು ತಮ್ಮ ಕುಲಕಸುಬಿನಿಂದ ರೈತನಿಗೆ ಪ್ರಾಚೀನ ಕಾಲದಿಂದಲೂ ತಮ್ಮನ್ನು ಉಪಕರಣಗಳ ತಯಾರಿಸುವ ಜವಾಬ್ದಾರಿ ಹೊತ್ತು ಕೃಷಿ ಆರ್ಥಿಕತೆಗೆ ಸಹಾಯಕವಾಗುತ್ತಿದ್ದಾರೆ ಎಂದರೆ ತಪ್ಪೇನಿಲ್ಲ.

ಅಂದು ಬೆಳೆಯನ್ನು ಬೆಳೆಯಬೇಕಾದರೆ ಬಡಗಿಯರು ತಯಾರಿಸಿದ ಉಪಕರಣಗಳಿಂದಲೇ ಬಿತ್ತುವುದು, ನೇಗಿಲು ಹೊಡೆಯುವುದು, ಹರಗುವುದು, ಪ್ರತಿಯೊಂದು ಕಟ್ಟಿಗೆ ಉಪಕರಣಗಳನ್ನು ಮಾಡುವ ಬಡಗಿಯರೇ ಕೊನೆಗೆ ಸೆಕ್ಕೆ ಬಡಿಯುವುದಕ್ಕೂ ಈ ಬಡಗಿಯರೇ ಬೇಕು. ಯಾರು ಬೇಕು ಅವರು ತಯಾರಿಸಿದರೆ ಅದು ಕ್ಷಣಿಕವಾದರೂ ಅರ್ಥದಲ್ಲಿ ಕೈಕೊಡುವ ಸಂಭವವೂ ಉಂಟು.

ಇಂದು ಹಳ್ಳಿಗಳಲ್ಲಿ ಇತರ ಜಾತಿಯವರು ಬಡಗಿತನ ಮಾಡುತ್ತಾರೆ. ಆದರೆ ರೈತರು ಬಢಗಿಯರ ಹತ್ತಿರ ಬಂದೇ ಸಾಮಾಗ್ರಿಗಳನ್ನು ತಯಾರಿಸಿಕೊಳ್ಳುವ ಪದ್ದತಿ ಇದೆ. ಅಂದರೆ ಅವರು ಆ ಕೆಲಸದಲ್ಲಿ ನಿಪುಣತೆಯನ್ನು ಪಡೆದಿರುತ್ತಾರೆ. **Practies makes man perpect** ಎನ್ನುವ ಆಂಗ್ಲ ಗಾದೆಯಂತೆ ಕುಶಲತೆಯ ಜೊತೆಗೆ ವಂಶ ಪರಂಪರೆಯಾಗಿ ಬಂದಿರುತ್ತದೆ. 'ಅಲ್ಲೇ ನಿಮ್ಮೋಣ್ಯಾಗ ಮಾಡ್ತಿದ್ನಲ್ಲ, ಅವ್ನು ಕೂಡ ಕೆಲ್ಸ ಮಾಡ್ಸಬೇಕು ಎಂದರೆ ಬಡಿಗೇರು ಬಡಿಗೇರಾ, ಕಮ್ಮಾರು, ಕಮ್ಮಾರ. ಯಾರು ಯಾರು ಯಾವ ಯಾವ ಕೆಲ್ಸ ಮಾಡಬೇಕೋ ಅವರವರು ಮಾಡಿದ್ರ ಚಂದ' ಎನ್ನುವ ಮಾತು ಕೇಳಿ ಬರುತ್ತವೆ. ಹಾಗಾದರೆ ಬಡಗಿತನದಿಂದಲೇ ಕೃಷಿ ಆರ್ಥಿಕತೆ ಸಾಧ್ಯವಿರಲಿಕ್ಕೆ ಬೇಕು. ರೈತ ಅಥವಾ ಕೃಷಿಕ ಬೆಳೆದ ಧಾನ್ಯವನ್ನು ಹತ್ತಿರದ ಮಾರುಕಟ್ಟೆಗೆ ಹೋಗಿ ತಾನು ಬೆಳೆದಿದ್ದನ್ನು ಮಾರಾಟ ಮಾಡಿ ಹಣವನ್ನು ಪಡೆದು ಆರ್ಥಿಕ ಬೆಳವಣಿಗೆ ಹೊಂದುತ್ತಾನೆ. ಆಗ ಸಾರಿಗೆ ಸಂಪರ್ಕ ಇಲ್ಲದಂತ ಸಂದರ್ಭದಲ್ಲಿ ರೈತ ಸಾಗಾಣಿಕೆ ಮಾಡಲು ವಾಹನ ಬಂಡಿಯೇ ಆಗ ಸಾರಿಗೆ ಸಂಪರ್ಕ ಬಂಡಿಯೇ ಆಗಿತ್ತು ಎನ್ನುವಾಗ ಅದನ್ನು ತಯಾರು ಮಾಡುವವನು ಬಡಗಿಗೂ ಸಲ್ಲಬೇಕು. ಆದ್ದರಿಂದ ಬಡಗಿತನದಿಂದ ಕೃಷಿ ಆರ್ಥಿಕತೆ ಸಾಧ್ಯ ಇತ್ತು. ಇದೆ. ಆದರೆ ಈ ದಿನಗಳಲ್ಲಿ ಆಧುನಿಕ ವಶೀಕರಣದಿಂದ ಅವರ ಮೂಲ ಮೊನಚು ಕಳಚಿದೆ. ಆದರೂ ಹಳ್ಳಿಗಳಲ್ಲಿ ಕೃಷಿ ಆರ್ಥಿಕತೆಗೆ ಬಡಗಿತನವೇ ಕಾರಣ ಎಂಬುದನ್ನು ನಾವು ಒಪ್ಪಿಕೊಂಡರೂ ಸರಿಯೇ.

ಇಂದು ವ್ಯವಸಾಯವೇ ಕೃಷಿ ಆರ್ಥಿಕತೆಗೆ ಪೂರಕವೆನ್ನುವಂತಿಲ್ಲ. ವ್ಯವಸಾಯ ವೈಜ್ಞಾನಿಕವಾಗಿ ಬೆಳೆದಂತೆಲ್ಲಾ ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿದೆ. ವ್ಯವಸಾಯದಲ್ಲಿ ಕೃಷಿ ವಿಜ್ಞಾನ ತಾಂತ್ರಿಕತೆಯನ್ನು ಬಳಸುವುದನ್ನು ವೈಜ್ಞಾನಿಕ ಬೇಸಾಯ ಪದ್ದತಿಯನ್ನು ಪ್ರಚಲಿತದಲ್ಲಿ ಬರುವುದು ಒಂದೆಡೆ ಕೂಡ ಬೇಸಾಯದ ಮೂಲ ಉಪಕರಣಗಳ ಬದಲಾಗಿ ಆಧುನಿಕ ಯಂತ್ರೋಪಕರಣವನ್ನು ಉಪಯೋಗಿಸುತ್ತಾರೆ. ನೇಗಿಲಿನ ಬದಲಾಗಿ ಕುಂಟಿಯ ಬದಲಾಗಿ ಟ್ರ್ಯಾಕ್ಟರ್‌ನಿಂದ ರಂಟೆ ಹೊಡೆಯುವುದು, ಹರಗುವುದನ್ನು ಮಾಡುತ್ತದೆ. ಕೂರಿಗಿಯ ಬದಲಾಗಿ ಸೀಡ್ ಡ್ರಿಲ್ ಎಂಬ ಯಂತ್ರವನ್ನು ಬಿತ್ತನೆ ಕಾರ್ಯಕ್ಕೆ

ಬಳಸುತ್ತಾರೆ. ಔಷಧಿ ಸಿಂಪಡಿಸುವುದು, ಕೊಯ್ಯಲು, ಇತ್ಯಾದಿ ವ್ಯವಸಾಯ ಯಂತ್ರೋಪಕರಣಗಳು ಮತ್ತು ಸಾರಿಗೆ ಸಂಪರ್ಕದಂತಿದ್ದ ಬಂಡಿಯ ಬದಲಾಗಿ ಲಾರಿ, ಟ್ರಾಕ್ಟರ್, ಇತ್ಯಾದಿ ಯಂತ್ರಗಳು ಬಂದಿರುವುದರಿಂದ ಬಡಗಿ ಮಾಡುವ ಕಟ್ಟಿಗೆಯ ಉಪಕರಣಗಳು ತನ್ನ ಸ್ಥಿತಿಯನ್ನು ಸ್ಥಿರಗೊಳಿಸಲು ಒದ್ದಾಡುತ್ತಾ ಇದೆ.

ಎಂತಹ ಆದುನಿಕರಣ ಬಂದರೂ ವ್ಯವಸಾಯದ ಉಪಕರಣಗಳ ಮುಂದೆ ಏನು ಮಾಡಲು ಆಗುವುದಿಲ್ಲ. ಏಕೆಂದರೆ ಭಾರತ ಹಳ್ಳಿಗಳ ದೇಶ ಆದ್ದರಿಂದ ಹಳ್ಳಿಗಳಂತಲ್ಲಿ ಈ ಆದುನಿಕ ಯಂತ್ರೋಪಕರಣಗಳ ಪ್ರಭಾವ ಬೀರಿದರೂ ಅದು ತನ್ನ ಸ್ಥಾನವನ್ನು ಬಿಟ್ಟುಕೊಡುವುದಿಲ್ಲ. ಏಕೆಂದರೆ ಕೃಷಿಕರು ಬಡವರು ಆದುನಿಕ ಯಂತ್ರಗಳನ್ನು ಕೊಂಡುಕೊಳ್ಳುವ ಶಕ್ತಿ ಕೆಲವೇ ಕೆಲವು ವ್ಯಕ್ತಿಗಳಿಗಿರುವುದರಿಂದ ಬಡಗಿಯರು ತಯಾರಿಸುವ ಕೃಷಿ ಉಪಕರಣಗಳಿಗೆ ಯಾವ ಧಕ್ಕೆಯೂ ಬರದು. ಇಂದಿಗೂ ಕೃಷಿ ಆರ್ಥಿಕತೆಗೆ ಬಡಗಿತನ ಮೂಲ ಆಧಾರವಾಗಿದೆ. ಅದಕ್ಕೇನೆ ದೇಶದ ಬೆನ್ನೆಲುಬು ರೈತ ರೈತನ ಬೆನ್ನೆಲುಬು ಬಡಗಿ ಎಂದು ಹೇಳುವುದರಲ್ಲಿ ಅರ್ಥವಿದೆ.

**೬.೧. ಆಯ ಪದ್ದತಿ :**

ಗ್ರಾಮೀಣ ಪ್ರದೇಶದಲ್ಲಿ ಆಯ - ಆಯಗಾರಿಕೆ ಅವುಗಳ ವ್ಯವಸ್ಥೆಯ ಸಮಗ್ರ ಮಾಹಿತಿ ಸಿಗುತ್ತದೆ. ಅಂದು ಹಣದ ಚಲಾವಣೆ ಬದಲಾಗಿ ವಸ್ತು ವಿನಿಮಯ ಪದ್ದತಿ ಜಾರಿಯಲ್ಲಿತ್ತು.

ನಮ್ಮ ದೇಶ ಕೃಷಿ ಪ್ರಧಾನವಾದ ದೇಶ ಅದು ಹಳ್ಳಿಗಳ ದೇಶ. ಈ ಹಳ್ಳಿಗಳಲ್ಲಿರುವ ಜನಸಂಖ್ಯೆಯ ಪೈಕಿ ಸುಮಾರು ಶೇಕಡಾ ೫೦-೫೨ ರಷ್ಟು ಬೇಸಾಯ ಮಾಡಿಕೊಂಡಿರುವವರು. ಸುಮಾರು ೩೦ ಪ್ರತಿಶತ ವ್ಯವಸಾಯ ಕಾರ್ಮಿಕರು, ಉಳಿದ ಶೇ೧೮-೧೯ ರಷ್ಟು ಜನ ಬಡಿಗಿತನ, ಕಂಬಾರಿಕೆ, ನೇಕಾರಿಕೆ, ಪೌರೋಹಿತ್ಯ ಇತ್ಯಾದಿ ವೃತ್ತಿಗಳನ್ನು ಅವಲಂಬಿಸಿ ಕೊಂಡಿರುವವರು. ಕೃಷಿ ಪ್ರಧಾನ ದೇಶವಾದ್ದರಿಂದ ಭೂಮಿಗೆ ಮಹತ್ವ ಹೆಚ್ಚು. ಈ ಭೂಮಿಯ ಒಡೆಯನಾದ ರೈತನನ್ನು ಕೇಂದ್ರವಾಗಿಟ್ಟುಕೊಂಡು ಉಳಿದ ವೃತ್ತಿಗಳು ರೂಪಗೊಂಡವು. ರೈತ ಕುಟುಂಬ ಎಲ್ಲರಿಗೂ ಬೇಕಾದ ಆಹಾರವನ್ನು ಉತ್ಪಾದಿಸಿದರೆ ಈ ರೈತ ಕುಟುಂಬಕ್ಕೆ ಬೇಕಾದ ಸರಕುಗಳನ್ನು, ಸೇವೆಗಳನ್ನು ಉಳಿದ ಕುಟುಂಬಗಳು ಅಂದರೆ ಕೈ ಕಸುಬಿನವರು, ಊಳಿಗದವರು, ಇತ್ಯಾದಿ ಸಲ್ಲಿಸುತ್ತೇವೆ. ಉದಾಹರಣೆಗೆ ರೈತರಿಗೆ ಬೇಕಾದ ನೇಗಿಲು, ನೊಗ, ಹಿಡಿ, ಬಾಗಿಲುಗಳನ್ನು ಬಡಗಿ ಮಾಡಿಕೊಟ್ಟರೆ, ಕುಡುಗೋಲು, ಬಾಚಿ, ಸಲಿಕೆ, ಇತ್ಯಾದಿ ಲೋಹದ ವಸ್ತುಗಳನ್ನು ಕಮ್ಮಾರ ಒದಗಿಸುತ್ತಾನೆ. ಚಮ್ಮಾರನು ಮೆಟ್ಟು ಚರ್ಮದ ಪಟ್ಟಿ ಮಾಡಿಕೊಟ್ಟರೆ, ಕಂಬಾರನು ಅಡಿಗೆಗೆ ಬೇಕಾದ ಮಡಿಕೆಗಳನ್ನು ಹಬ್ಬ ಹರಿದಿನಗಳಲ್ಲಿ ಹಚ್ಚುವ ಮಣ್ಣಿನ ಹಣತೆಗಳನ್ನು ಮಾಡಿಕೊಡುತ್ತಾನೆ. ಕ್ಷೌರಿಕನು ತಲೆಗೂದಲು ತೆಗೆಯುವ ಸೇವೆ ಮಾಡಿದರೆ, ಊರಿನ ಅಗಸನು ಮಂಗಳ-ಅಮಂಗಳ ಸಂದರ್ಭಗಳಲ್ಲಿ ಬಟ್ಟೆಗಳನ್ನು ಮಡಿ ಮಾಡಿಕೊಡುತ್ತಾನೆ. ಮದುವೆ ಮುಂಜಿಗಳಲ್ಲಿ ಚಪ್ಪರಕ್ಕೆ ಬಟ್ಟೆ ಕಟ್ಟಿ ಅಲಂಕರಿಸುತ್ತಾನೆ. ಹೀಗೆ ಇವರು ಸಲ್ಲಿಸುವ ಸೇವೆಗೆ ಸಂಪ್ರದಾಯದಂತೆ ರೈತ ಕುಟುಂಬದವರು ತಾವು ಬೆಳೆದದ್ದರಲ್ಲಿ ಒಂದು ಪಾಲನ್ನು ಸಂಭಾವನೆಯಾಗಿ ಕೊಡುತ್ತಾರೆ. ಇದೇ ಆಯ, ''ಆಯ''ವನ್ನು ತೆಗೆದುಕೊಳ್ಳುವವರಿಗೆ ಆಯಗಾರರು ಎಂದು ಕರೆಯುತ್ತಾರೆ.

ಆಯ ಪದ್ಧತಿಯನ್ನು ಪ್ರದೇಶದಿಂದ ಪ್ರದೇಶಕ್ಕೆ ತನ್ನ ಹೆಸರನ್ನು ಬದಲಿಸಿಕೊಳ್ಳುತ್ತವೆ. ಉತ್ತರ ಕರ್ನಾಟಕದ ಕಡೆ ಅದನ್ನು "ಬಾರಾ ಬಲೂತೆ" ಎಂದು ಕರೆಯುತ್ತಾರೆ. ಮಂಡ್ಯ, ಮೈಸೂರುಗಳ ಕಡೆ ಅಡದೆ ಎಂದು ಹೆಸರಿದೆ. ಆಯಗಾರರಿಗೆ ಅಲ್ಲಿ ಅಡದೆಯವರು ಎಂದು ಕರೆಯುತ್ತಾರೆ, ಉತ್ತರ ಕನ್ನಡ ಜಿಲ್ಲೆಯ ಅಂಕೋಲ ದಲ್ಲಿ ಆಯದ ಪ್ರತಿರೂಪಕ್ಕೆ ಎಚ್ಚ ಎನ್ನುತ್ತಾರೆ. ಆಯಗಾರರನ್ನೇ ಎಚ್ಚಗಾರರು ಎಂದು ಕರೆಯುವರು. ಹೀಗೆ ಹಕ್‌ದಾರರು, ಬಾಬುದಾರರು, ಗುತ್ತಿನವರು, ಇತ್ಯಾದಿ (ಜಾನಪದ ಸಾಹಿತ್ಯ ದರ್ಶನ-೭, ಡಾ॥ವೃಷಬೇಂದ್ರಸ್ವಾಮಿ) ಶಬ್ದಗಳಿಂದ ಕರೆಯುವರು.

ಆಯ ಪದ್ದತಿ 'ಬಲೂತಾ' ಎಂಬ ಹೆಸರಿನಿಂದ ಮಹಾರಾಷ್ಟ್ರದಲ್ಲಿ ಸಾರ್ವತ್ರಿಕವಾಗಿ ಕಂಡು ಬಂದಿದೆ. ಬಲೂತೆ ಎಂದರೆ ಗ್ರಾಮೀಣ ಕೈಕಸಜನವರಿಗೆ ಹಾಗೂ ಗ್ರಾಮದ ಊಳಿಗದವರಿಗೆ ಕೊಡುವ ಧಾನ್ಯ ರೂಪದ ಸಂಭಾವನೆ ಅಥವಾ ಪಾಲು. ಇಂತಹ ಸಂಭಾವನೆ ಪಡೆಯುವವರನ್ನು 'ಅಲೂತೆದಾರ' ಮತ್ತು ಬಲೂತೆದಾರರೆಂದು ಕರೆಯುತ್ತಾರೆ.

ಇನ್ನು ದೇಶದ ಇತರ ಭಾಗದಲ್ಲಿ ಗ್ರಾಮದ ಸೇವಕರಿಗೆ ಧಾನ್ಯರೂಪದ ಸಂಭಾವನೆ ಕೊಡುವ ಪದ್ಧತಿ ಕಂಡು ಬರುತ್ತಿದೆ. ಉತ್ತರ ಪ್ರದೇಶ, ರಾಜಸ್ಥಾನ, ಪಂಜಾಬಿ, ಗುಜರಾತ್, ಆಂಧ್ರ ಪ್ರದೇಶ, ತಮಿಳು ನಾಡು, ಕೇರಳದ ಮಲಬಾರ ಮುಂತಾದ ಭಾಗಗಳಲ್ಲಿ ಸಾಕಷ್ಟು ವ್ಯಾಪಕವಾಗಿ ಅದು ಕಂಡು ಬಂದಿದೆ. ಉತ್ತರ ಭಾರತದ ಹಲವೆಡೆ ಅದನ್ನು ಜಜಮಾನಿ ಎಂದು ಕರೆಯುತ್ತಾರೆ. ಆಯ ಪಡೆಯುವ ಹಕ್ಕನ್ನು ಜಜಮಾನಿ ಹಕ್ ಎಂದೂ ಆಯದ ಕುಳಗಳಿಗೆ ಜಜಮಾನ್ ಎಂದೂ ಆಯಗಾರರನ್ನು ಕಾಮೀನ್ ಪರ್ಜನ್, ಪರ್ಧಾನ್, ಕಾಮವಾಲೇ, ಕಾಮಕರನೇವಾಲೇ. ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುವುದುಂಟು.

**೬.೨. ಆಯದ ಪ್ರಾಚೀನತೆ :**

ಗ್ರಾಮೀಣ ಭಾರತದಲ್ಲಿ ಬಹು ಪ್ರಾಚೀನ ಕಾಲದಿಂದಲೂ ಇದ್ದಿರಬಹುದೆಂದು ನಂಬಲಾಗಿದೆ. ಪಶ್ಚಿಮ ಭಾರತದ ಗ್ರಾಮ ಸಮುದಾಯಗಳ ಇತಿಹಾಸವನ್ನು ಸಮೀಕ್ಷಿಸಿದ ಡಾ॥ಎ.ಎಸ್.ಅಲ್ತೇಕರ್ ಬಲೂತಾ ಪದ್ಧತಿ ಆರ್ಯರ ಕಾಲಕ್ಕೆ ಹುಟ್ಟಿರಬೇಕೆಂದೂ ಅದು ಅವರಿಂದಲೇ ಕ್ರಮೇಣ ದಕ್ಷಿಣ ಭಾರತದ ಕಡೆ ಹಬ್ಬಿರಬೇಕೆಂದೂ ಬರೆಯುತ್ತಾರೆ. ಆದರೆ ಪೂರ್ವದ ಪ್ರಜಾಸತ್ತೆಗಳು ಎಂಬ ಗ್ರಂಥದಲ್ಲಿ ರಾಧಕಮಲ ಮುಖರ್ಜಿ ಎಂದು ಜಜಿಮಾನಿ ಪದ್ಧತಿಯು ಅಕ್ಕಿ ಬೆಳೆಯುವ ದಕ್ಷಿಣ ದ್ರಾವಿಡ ಜನಾಂಗಗಳಲ್ಲಿ ಮೊದಲಿಗೆ ಬಳಕೆಗೆ ಬಂದಿರಬೇಕೆಂದು ಆಯ ವಿಧಾನವಾಗಿ ಉತ್ತರಕ್ಕೆ ಹರಡಿತೆಂದೂ ಅಭಿಪ್ರಾಯಪಡುತ್ತಾರೆ.

ಕ್ರಿ.ಶ. ೧೧ ನೇ ಶತಮಾನದಿಂದ ಈಚೆಗೆ ಆಯಗಾರರ ಬಗ್ಗೆ ಹಲವು ಶಾಸನಗಳು ಸಿಕ್ಕಿವೆ. ಅವುಗಳನ್ನು ೧೨ ಆಯಗಾರರನ್ನು ಒಟ್ಟಾಗಿ ತಿಳಿಸುವ ಶಾಸನಗಳಲ್ಲಿ ಗಾವುಂಡ, ಶಾನುಭೋಗ, ತಳಾರ, ಅಂಬಿಗ, ಬಾರಿಕರ, ತೋಟಿಗ, ಕಲ್ಲು ಕುಟಿಗ, ಕಮ್ಮಾರ, ಅಕ್ಕಸಾಲಿಗ, ಬಡಿಗ, ಕ್ಷೌರಿಕ ಮತ್ತು ಮುಂತಾದ ಹೆಸರಿವೆ ಎಂದು ಡಾ॥ದೀಕ್ಷಿತ್ ತಿಳಿಸುತ್ತಾರೆ. (ಜಾನಪದ ಸಾಹಿತ್ಯ ದರ್ಶನ-೭ ಡಾ॥ವೃಷಬೇಂದ್ರಸ್ವಾಮಿ).

ಪ್ರಾಚೀನ ಕಾಲದಲ್ಲಿಯೂ ಆಯಗಾರರ ಪದ್ಧತಿ ಇತ್ತೆಂದು ಮನಸ್ಮೃತಿಯಿಂದ ವಿಷ್ಣು ಪುರಾಣದಿಂದ ಹಾಗೂ ಕೌಟಿಲ್ಯನ ಅರ್ಥಶಾಸ್ತ್ರದಿಂದ ತಿಳಿದುಬರುವುದಾಗಿ ಡಾ॥ಎಸ್. ಅಳತೇಕರ್ ಅವರು

ಅಭಿಪ್ರಾಯಪಡುತ್ತಾರೆ.

ಧಾರವಾಡ ಜಿಲ್ಲೆಯ ಹೊಸರು ಗ್ರಾಮದ ಕ್ರಿ.ಶ. ೧೧೮೬ರ ಶಿಲಾಯುಗದಲ್ಲಿ ಬಡಗಿಯನ್ನು ಕುರಿತು ಹೇಳಿಕೆ ಈ ರೀತಿ ಇದೆ.

'ಬಡಗಿ ಕಲೋಜ, ಮೂರಕೇಶ್ವರ ದೇವರ ತೋಟಕಮ್ಮ ಮನೆಯಗೆಯ್ದು ಕೂಲಿಯ ನೀತುಂಟು ನಿತುಮಂ ದೇವರ ನಿವೇದಕ್ಕೊಮ್ಮಾನ ಅಕ್ಕಿಯ ನೆಡೆವಂತಾಗಿ ತನ್ನ ಪುತ್ರ ಪಾತ್ರರಾದಿಯಾಗಿ ಕೊಟ್ಟಿಯಿಲ್ಲ. ಬಡಗಿತನಕ್ಕಾರು ನಿಂದವರ ಹಿಟ್ಟು ಗಾವುಂಡನುಂ ಪ್ರತಿಪಾಲಿಸುವನು'.

ಹಾಗೆಯೇ ಹೊಯ್ಸಳ ಬಲ್ಲಾಳ ರಾಯನ ಕಾಲದಲ್ಲಿ ಕ್ರಿ.ಶ. ೧೧೦೩. ಕೊಲ್ಲಾಪುರದ ತಾಮ್ರ ಶಾಸನದಲ್ಲಿ.

'ಆ ಊರಿರಿಂಗೆ ಹಿಟ್ಟಿನ ತಲವಾಗಿ ಮೂರಗಾಯಕ ಆತಂಗೆ ಹಿಟ್ಟಿಕಾರ ಬಡಗಿ ಹಿಲೇಜಗೆ ಮತ್ತರು -೪ ಹಿಟ್ಟಿನ ಕಮ್ಮಾರ ದೇವೂಜಂಗೆ ಮತ್ತರ-೪, ಹಿಟ್ಟಿನ ಅಕ್ಕಸಾಲೆ ಪಾರಿಸೊಜಂಗಿ ಮತ್ತರು-೪ 'ಎಂದು ಭೂಮಿದಾನ ಪಡೆದವರ ವಿವರಗಳಿವೆ.

ಕ್ರಿ.ಶ. ೧೧೩೫ರ ಧಾರವಾಡ ಜಿಲ್ಲೆಯ ಚಿಕ್ಕ ಹಂದಿಗೋಳ ಗ್ರಾಮದ ಶಿಲಾ ಶಾಸನವನ್ನು ಬರೆದವನು ಹಿಟ್ಟಿನ ಸೇನಬೋವ. ಬಡಗಿ, ಕಮ್ಮಾರ, ಅಕ್ಕಸಾಲಿ, ಸೇನ ಬೋವ, ತಲವಾರಿ, ಮುಂತಾದವರಿಗೆ ಹಿಟ್ಟಿನ ಹಾಗೂ ಹಿಟ್ಟುಕಾರು ಎಂದು ಹಿಟ್ಟು ಪಡೆದ ವಿಶೇ ರೂಪಗಳನ್ನೇ ಬಳಸಲಾಗುತ್ತಿದ್ದಿತೆಂದು ತಿಳಿದು ಬರುತ್ತದೆ.

ಮರಾಠ ಕಾಲದ ಮಹಾರಾಷ್ಟ್ರ ರೂಢಿಯಲ್ಲಿದ್ದಲ್ಲಿ **ಬಾರಾ ಬಲೂತೆ** ಎಂಬ ಪದ್ದತಿಗನುಗುಣವಾಗಿ ಹಳ್ಳಿಯ ಶ್ರಮ ಜೀವಿಗಳ ಹಾಗೂ ಆಡಳಿತಗಾರರ ಹನ್ನೆರಡು ವರ್ಗಗಳವರು ಜಾನಕೆಯ ಅಗತ್ಯಗಳನ್ನು ಪೂರೈಸಿಕೊಟ್ಟು ರಾಶಿಯ ಸಮಯದಲ್ಲಿ ತಮ್ಮ ಪಾಲಿನ ಧಾನ್ಯವನ್ನು ಪಡೆದು ತನ್ಮೂಲಕ ಉಪ ಜೀವನ ಸಾಗಿಸುತ್ತಿದ್ದರು.

ವಿಜಯನಗರದ ಅರಸರ ಕಾಲದಲ್ಲಿ ರೂಢಿಯಲ್ಲಿದ್ದ ಆಯಗಾರ ಪದ್ದತಿಯೂ ಇದೇ ಸ್ವರೂಪದಾಗಿದ್ದಿತು ಎಂದು ಶ್ರೀ ಎಸ್. ವೆಂಕಟರಮಣಯ್ಯರು ಅಭಿಪ್ರಾಯಪಡುತ್ತಾರೆ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಮುಂಚೆಯೂ ಕರ್ನಾಟಕದಲ್ಲಿ ಕುಶಲ ಕೆಲಸಗಾರರಿಗೆ ಅವರ ಸೇವೆಗೆ ಪ್ರತಿಯಾಗಿ ಧಾನ್ಯ ರೂಪದಲ್ಲಿ ಕೂಲಿಯನ್ನು ಕೊಡಲಾಗುತ್ತಿದ್ದ ವಿಷಯ. ಶಿಲಾಶಾಸನಗಳಿಂದ ತಿಳಿಯ ಬರುತ್ತದೆ. ಮೇಲೆ ಹೇಳಿದ ಹೊಸೂರಿನ ಶಿಲಾ ಶಾಸನದಲ್ಲಿ 'ಹಿಟ್ಟುಕಾರ ,ಬಡಿಗ ಕಲೋಜ ಮೂರಕೇಶ್ವರ ದೇವರ ತೋಟ, ಕೆಂಪು, ಮನೆಯಗೆಯಿದ ಕೂಲಿಯೆನಿತುಂಟ ನಿತುಮಂ ದೇವರ ನಿವೇದ್ಯಕ್ಕೊಮ್ಮನ ಅಕ್ಕಿಯ ನಡೆಯುವಂತಾಗಿ..... ಕೊಟ್ಟ'

ಲಕ್ಕುಂಡಿಯ ಶಿಲಾ ಶಾಸನದಲ್ಲಿ ಬೆಳ್ಳಿಗವೇಜದ ವ್ಯಕ್ತಿಯೋರ್ವನು ಹಣದ ರೂಪದಲ್ಲಿಯೂ ಬಡಗಿ ಮತ್ತು ಕಮ್ಮಾರರು ಧಾನ್ಯ ರೂಪದಲ್ಲಿಯೂ ಧಾನ್ಯವನ್ನು ಕೊಟ್ಟರೆಂದು ಹೇಳಿದುದು ಗಮನಾರ್ಹವಾಗಿದೆ.

ಇವೆಲ್ಲವುಗಳನ್ನು ನೋಡಿದರೆ ಆಯ ಪದ್ಧತಿ ಇದಕ್ಕಿಂತ ಮುಂಚಿತವಾಗಿ ಪ್ರಚಲಿತದಲ್ಲಿತ್ತು ಎಂಬುದನ್ನು ತಿಳಿಸುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ನಾವು ಕಾಣಬಹುದಾಗಿದೆ. ರೈತರು ವ್ಯವಸಾಯದ ಉಪಕರಣಗಳನ್ನು ಬಡಗಟಿಗೆಗೆ ಬಂದು ಆಯಿಸಿಕೊಳ್ಳುತ್ತಾರೆ. ಒಂದು ಕೂರಿಗೆಯನ್ನು ಆಯಿಸಿದರೆ ನಾಲ್ಕು ಗಿದ್ನ ಜೋಳವನ್ನು ಪಡೆಯುತ್ತಾರೆ. ಒಂದೊಂದು ಉಪಕರಣಗಳಿಗೂ ಇಂತಿಷ್ಟು ಧವಸ ಧಾನ್ಯ ಪಡೆಯುವ ಪದ್ಧತಿ ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಕಾಣಬಹುದು. ಆದರೆ ಇಲ್ಲಿ ಆಯ ಪದ್ಧತಿಗನುಗುಣವಾಗಿ ವರ್ಷಕ್ಕೆ ಒಂದು ಪಲ್ಲ ಜೋಳ ಅಥವಾ ಇತರ ಕಾಳನ್ನು ಪಡೆಯುತ್ತಾ ಜೀವನ ಮಾಡುತ್ತಾರೆ. ಈ ಆಯದಿಂದ ಸಮಾಜದಲ್ಲಿ ತಮ್ಮನ್ನು ಇತರ ಸಮುದಾಯಗಳೊಂದಿಗೆ ಅನೋನ್ಯ ಸಂಬಂಧವನ್ನು ಹೊಂದಿರುತ್ತಾರೆ.

ಆದರೆ ಇಂದಿನ ಆಧುನೀಕರಣಗಳಿಂದಾಗಿ ಬಡಗಿಯರ ಸ್ಥಿತಿ ಚಿಂತಾಜನಕವಾಗುತ್ತಾ ವಾಲಿದೆ. ಅಂದಿಗೂ ಮತ್ತು ಇಂದಿಗೆ ತುಂಬಾ ವ್ಯತ್ಯಾಸ ಏದೆ. ಇಂದು ಆಯ ಪದ್ಧತಿಯು ಕಣ್ಮರೆಯಾಗುತ್ತಿದೆ ಕಾರಣ ಇವರ ಜೀವನ ಮಟ್ಟ ಸುಧಾರಿಸಲಿಕ್ಕೆ ನಗರಗಳಿಗೆ ವಲಸೆ ಹೋಗಿ ಜೀವನ ಮಾಡುವ ಪರಿಸ್ಥಿತಿ ಬಂದಿದೆ. ಮಳೆ ಮಳೆ ಸಂದರ್ಭಕ್ಕನುಸಾರವಾಗಿಲ್ಲದ ಕಾರಣ ರೈತರು ಬೆಳೆದ ಧಾನ್ಯವೂ ಅವರಿಗೇ ಸಾಲದೆಂಬುದು ಸತ್ಯ. ಆದರೂ ಗ್ರಾಮೀಣ ಪ್ರದೇಶದಲ್ಲಿ ಈ ಪದ್ಧತಿ ಜೀವಂತವಾಗಿದೆ ಎಂದು ಹೇಳಬಹುದು. ಮುಂದೆ ಇದರ ಬಗ್ಗೆ ಕತೆ ಹೇಳಬೇಕಾಗಬಹುದು ಎಂಬುದು ದುರಂತ.

ಹೀಗೆ ಇವರು ಸಮಾಜದಲ್ಲಿ ತಮ್ಮ ಸ್ಥಾನವನ್ನು ಬಳಸಿಕೊಂಡು ಬಂದಿದ್ದರೂ ಹಿಂದೆ ಇವರಿಗೆ ತೆರಿಗೆಯನ್ನು ವಿಧಿಸುತ್ತಿದ್ದ ವಿವರಗಳು ಸಿಗುತ್ತವೆ.

ಪಂಚಾಳರನ್ನು ಸಮಾವೇಶಗೊಳಿಸಿ ವಿಧಿಸುತ್ತಿದ್ದ ತೆರಿಗೆಯನ್ನು ಉಲ್ಲೇಖಿಸಬಹುದು. ಬಡಗಿ ಕಮ್ಮಾರ, ಅಕ್ಕಸಾಲಿ, ಕಂಚುಗಾರ, ಮತ್ತು ಶಿಲ್ಪಿ ಎಂಬ (೫) ಐದು ವಿಧವಾದ ಕೆಲಸಗಾರರನ್ನು ಸಮಾವೇಶಗೊಳಿಸಿ ಪಂಚಾಳರು, ಪಾಂಚಕಾರರು, ವಿಶ್ವಕರ್ಮರು ಓಜರು, ಎಂಬ ಸಾಮಾನ್ಯ ವಾಚಕಗಳಿಂದ ಅನೇಕ ಶಾಸನಗಳಲ್ಲಿ ಕರೆಯಲಾಗಿದೆ.

**ಪಂಚಾಳ ತೆರಿಗೆ** (ಎ.ಕ.ವಿ.ಟೀ ನರಸೀಪುರ ೧೩೮ ರೂ, ಮತ್ತು) **ಪಂಚಕಾರು ಕದೇರೆ** (ಎ.ಕ.೮ ಹೊಳೆ ನರಸೀಪುರ ೭೨ ಕ್ರಿ.ಶ. ೧೨೩೮ ರಲ್ಲಿ) ವೂೀಜವರಿ (ಎ.ಕ.ಗುಂಡ್ಲಪೇಟೆ ೧೫೦) ಎಂಬ ಪದಗಳು ಈ ಐದು ವಿಧವಾದ ಕೆಲಸಗಾರರನ್ನು ಒಂದು ಎಂದು ಪರಗಣಿಸಿ ವೃತ್ತಿ ತೆರಿಗೆಯನ್ನೇ ವಿಧಿಸುತ್ತಿದ್ದರು ಎಂಬ ಅಂಶ ನಮ್ಮ ಗಮನಕ್ಕೆ ಬರುತ್ತದೆ.

ಹೀಗೆ ಪಂಚಕಾರುಕ ಹಣ, ಪಣ್ಣಕಾರು (ಎ.ಕ.೮ ಅರಕಲುಗೋಡು ೪೫ ಕ್ರಿ.ಶ. ೧೨೭೫) ಕಂಚಕಾರುಕ ಪೇಟಿಕೆ ಎಂಬ ಪದ ಪ್ರಯೋಗ ಅಭೇಕ ಶಾಸನಗಳಲ್ಲಿ ಕಂಡು ಬರುತ್ತದೆ. ಹೊಯ್ಸಳರ ಕಾಲದಲ್ಲಿ ಮತ್ತು ವಿಜಯನಗರ ಕಾಲದಲ್ಲಿ ತೆರಿಗೆ ವಿಷಯ ಪ್ರಸ್ತಾಪ ಹೆಚ್ಚು. 'ಪಂಚಾಳರ ತೆರ' ಎಂಬುದು ಕ್ರಿ.ಶ. ೯, ೧೦ ನೇ ಶತಮಾನದಲ್ಲಿ ಉಕ್ತವಾಗಿದೆ. ಕ್ರಿ.ಶ. ೧೩೨೯ ರಲ್ಲಿ ಪಂಚಾಳವಟಕೆ ಎಂಬ ಪದ ಉಂಟು. ಕೆಲವು ಕಡೆ ಓಜ ತೆರಿಗೆ ಎಂಬ ಪದವೂ ಬಳಕೆಯಾಗಿದೆ. ವೋಜದೇತೆಗೆ ಎಂಬ ತೆರಿಗೆ ಪದ್ಧತಿಯು ವಿಜಯನಗರ

ಕೃಷ್ಣದೇವರಾಯನ ಕಾಲದಲ್ಲಿ ಪ್ರಚಲಿತವಾಗಿದ್ದ ತೆರಿಗೆ ಎಂದು ತಿಳಿಯಬಹುದು.

ಇವು ಎಲ್ಲಾರನ್ನು ಒಟ್ಟುಗೂಡಿಸಿ ವಿಧಿಸುತ್ತಿದ್ದ ತೆರಿಗೆಯಾದರೆ ಇನ್ನು ಕೆಲವು ಒಂದೊಂದು ವೃತ್ತಿಯ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು ಎಂಬ ಅಂಶವನ್ನು ಕಾಣಬಹುದು.

ಪಂಚಾಳರು ಕೆಲಸಕ್ಕೆ ಬಳಸುವ ಉಪಕರಣಗಳ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು ಎಂಬ ಅಂಶವನ್ನು ಕಾಣಬಹುದು. ಅದರಲ್ಲಿ ಬಡಗಿಯ ಮೇಲೆ ಈ ಪದ್ಧತಿ ಇತ್ತು. ಬಡಗಿಗಳ ಮೇಲೆ ಪ್ರತ್ಯೇಕವಾದ ಬಡಗಿದೇರೆ ಎಂದು ತೆರವನ್ನು ವಿಧಿಸಲಾಗುತ್ತಿತ್ತು. ಚಾಲುಕ್ಯರು ಮತ್ತು ಹೊಯ್ಸಳರ ಕಾಲದಲ್ಲಿ ಇದರ ಉಲ್ಲೇಖ ಉಂಟು.

'ಕೊಡತಿ ವಣ, ಕೊಡತಿ.... ವಿ-೫ ಕೊಡತಿಗೆ ಹಾಗೆ ಒಂದು ಕುಲುಮೆದೆಲೆ' ಹೀಗೆ ಉಪಕರಣಗಳ ತೆರಿಗೆಯನ್ನು ವಿಧಿಸುತ್ತಿದ್ದನ್ನು ನೋಡಿದರೆ ಆ ಕಾಲದಲ್ಲಿಯೇ ಕೊಡತಿ ಎಂಬ ಮರದ ಸುತ್ತಿಗೆ ಇತ್ತು ಇದು ಬಡಗಿಗೆ ಮುಖ್ಯವಾದ ಉಪಕರಣ. (ಕರ್ನಾಟಕದಲ್ಲಿ ಶಿಲ್ಪಚಾರ್ಯರು ಡಾ||ಕೆ.ಎಸ್.ಕುಮಾರಸ್ವಾಮಿ).

ಇವೆಲ್ಲವುಗಳನ್ನು ನಾವು ನೋಡಿದೆ. ಆ ಕಾಲದಲ್ಲಿ ಬಡಗಿಗಳ ಅಥವಾ ಪಂಚಾಳರು ಸಮಾಜದಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದರು. ಅವರು ಸಮಾಜದಲ್ಲಿ ಇತರ ಸಮುದಾಯಗಳಿಗೆ ಬೇಕಾದ ವೃತ್ತಿಕಾರರಾಗಿದ್ದರು ಎಂಬ ಅಂಶ ತಿಳಿಯಬಹುದು.

ನನಗೆ ತಿಳಿದ ಮಟ್ಟಿಗೆ ಪಂಚಾಳರ ಉಪಕರಣಗಳ ಮೇಲೆ ರಾಜರು ತೆರಿಗೆಯನ್ನು ವಿಧಿಸುತ್ತಿದ್ದನ್ನು ನೋಡಿದರೆ ಅವರು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿ ಇದ್ದರು ಎಂಬ ಅಂಶ ಕಂಡು ಬರುತ್ತದೆ.

ಆದರೆ ಈಗ ಇಂತಹ ಪರಿಸ್ಥಿತಿ ಇಲ್ಲ. ಏಕೆಂದರೆ ಇವರ ಕರಕುಶಲಗಾರಿಕೆ ನಶಿಸಿ ಹೋಗುವ ಪರಿಸ್ಥಿತಿ ಬಂದಿದೆ. ಬಡಗಿಗಳು ಬರೀ ವ್ಯವಸಾಯ ಉಪಕರಣಗಳನ್ನು ತಯಾರಿಸಿ ಜೀವಿಸವುದು ಬಹು ಕಷ್ಟ. ಜೊತೆಗೆ ಅವರು ಬೇರೆ ಬೇರೆ ಆಲೋಚನಾ ಮಾರ್ಗದತ್ತ ಸಾಗುತ್ತಿದ್ದಾರೆ. 'ಈಗ ನಮ್ಮ ಜೀವನ ಕಷ್ಟ ಇದೆ ಸ್ವಾಮಿ ಈ ಕೆಲಸ ಯಾಕಾದ್ರ ಕಲ್ತಿನೋ. ನಾನು ನನ್ನ ಮಗನಿಗೆ ಈ ಕೆಲಸನಾ ದೇವರಾಣೆಗೂ ಮಾಡಿಸೊಲ್ಲ. ಆಗಿನ ಕಾಲನ ಬ್ಯಾರೆ, ಈಗಿನ ಕಾಲನ ಬ್ಯಾರೆ. ಈ ಹಳ್ಳಿಗಳಲ್ಲಿ ಜೀವಿಸಿ ನೋಡಿ ನಿಮಗೆ ಗೊತ್ತಾಗುತೆ' ಎಂದು ತನ್ನ ಅಸಾಯಕತೆ ಪರಿಸ್ಥಿತಿಯನ್ನೇ ಮತ್ತಿಹಳ್ಳಿ ಗುಡ್ಡ ಚಾರಿ ಹೇಳಿಕೊಳ್ಳುತ್ತಾನೆ. ಹೀಗೆ ಸಮಾಜದಲ್ಲಿ ಎಲ್ಲರಲ್ಲೂ ಬೆರೆತು ಹೋಗಿರುವ ಬಡಗಿ ತನ್ನ ಉಪ ಜೀವನವನ್ನು ಹಳ್ಳಿಗಳಲ್ಲಿ ಕೆಲಸ ಮಾಡುತ್ತಾ ಇನ್ನಿತರ ಬೇರೆ ಬೇರೆ ವೃತ್ತಿಗಳ ಜೊತೆಗೆ ಜೀವನೋಪಾಯ ಮಾಡುತ್ತಾನೆ.

**೬.೩. ಬಡಗಿತನಕ್ಕೆ ಸಿಗುವ ಕೆಲಸದ ಪ್ರಮಾಣ :**

ಬಡಗಿ ಸಮುದಾಯುಗಳು ತನ್ನ ವೃತ್ತಿಯನ್ನು ತನ್ನ ಜೀವನೋಪಾಯಕ್ಕಾಗಿ ಮುಂದುವರೆಸಿಕೊಂಡು ಬಂದಿದೆ ಬಡಗಿತನಕ್ಕೆ ಸಿಗುವ ಕೆಲಸದ ಪ್ರಮಾಣವನ್ನು ನೋಡಿದರೆ ಒಂದಿನ ಎರಡು-ಮೂರು ಕುಂಟೆ

ಹಾಯಿಸಬಹುದು. ಅವರು ಅಂದರೆ ಕೃಷಿಕರ ಆ ಕೆಲಸಕ್ಕೆ ಪರವಾಗಿ ೧ ಅಥವಾ ೨ ಗಿದ್ನ ಅಥವಾ ಪಡಿ ಜೋಳ ಬರಬಹುದು. ಪ್ರತಿದಿನವೂ ಹೀಗೆ ಬಂದರೆ ಅವರ ಜೀವನ ಮಟ್ಟ ಸುಧಾರಿಸುತ್ತದೆ. ಆದರೆ ಒಂದೊರ್ಷ ಮಾಡಿದ ಕೃಷಿ ಉಪಕರಣಗಳು ಮೂರು ನಾಲ್ಕು ವರ್ಷಗಳು ತಾಳಿಕೆ ಬರುವಾಗ ಅವುಗಳನ್ನೇಕೆ ಬಡಗಿಯರ ಹತ್ತಿರ ತರುತ್ತಾರೆ. ತಂದರೂ ಸೆಕ್ಕಿ ಬಡಿಸಿಕೊಳ್ಳುವುದಕ್ಕೆ ಬರುತ್ತಾರೆ. ಆಗ ಬಡಗಿಗೆ ಚಹಾ ಕುಡಿಸಿದರೆ ಮುಗಿಯಿತು. ಮಳೆ ಬೆಳೆ ಸರಿಯಾಗಿ ಆದರೆ ಅದರ ಜೀವನೋಪಾಯಕ್ಕೆ ಕೊರತೆ ಇಲ್ಲ. ಪ್ರಕೃತಿ ಮುನಿಸಿಕೊಂಡರೆ ಇವರು ಅಲೆಮಾರಿಯಾಗಿ ನಗರದತ್ತ ಮುಖ ತಿರುವುತ್ತಾರೆ.

ವರ್ತಮಾನ ಕಾಲದಲ್ಲಿ ಬಡಗಿಯರ ಪರಿಸ್ಥಿತಿ ತುಂಬಾ ಚಿಂತಾಜನಕವಾಗಿದೆ. ವಾರ್ಷಿಕ ಆದಾಯ ಒಂದು ಗ್ರಾಮದಲ್ಲಿ ಒಂದು ಬಡಗಿ ಕುಟುಂಬಕ್ಕೆ ಮೂರು ನಾಲ್ಕು ಆಯಗಳಿದ್ದರೆ ವರ್ಷಕ್ಕೆ ೧೮೦ ಸೇರಿ ೨೦೦ ಸೇರು ಜೋಳ ಬರಬಹುದು. ಅವು ವಾರ್ಷಿಕ ಆದಾಯವಾದರೆ ಜೊತೆಗೆ ಸಣ್ಣ ಪುಟ್ಟ ಕೆಲಸಗಳು ಕಾವು ಹಾಸುವುದು. ಇತ್ಯಾದಿ ಕೆಲಸಗಳು ಚಹಾ ಕುಡಿಯಲಿಕ್ಕೆ ಸಾಕಾಗಲ್ಲ. ವರ್ಷಕ್ಕೆ ಎರಡು ಚೀಲ ಜೋಳ ಬಂದರೆ ಅವು ವರ್ಷ ಪೂರ್ತಿ ಆಗಲಾರವು. ಅದಕ್ಕೆ ಇಂದು ಹೆಚ್ಚು ಕೃಷಿ ಉಪಕರಣಗಳಿಗಿಂತ ಗೃಹೋಪಕರಣದ ಅದು ಆಧುನಿಕ ಕಾಲದ ಮನೆಯ ಕೆಲಸ ಹಿಡಿದರೆ ಅವನ ಖರ್ಚಿಗಿಂತ ಲಾಭ ಇರುತ್ತದೆ.. ಇಲ್ಲದಿದ್ದರೆ ಲಾಭಕ್ಕಿಂತ ಖರ್ಚು ಹೆಚ್ಚಾಗುತ್ತದೆ. ಹಾಗಾದರೆ ಎಲ್ಲಿಂದ ಬರುತ್ತದೆ ಎಂದರೆ ಸಾಲ ಅಥವಾ ರೈತರ ಮನೆಯಲ್ಲಿ ಏನಾದರೂ ಮಾಡಿಕೊಡುತ್ತೇನೆಂದು ಹೇಳಿ ಧವಸ ಧಾನ್ಯಗಳನ್ನು ಪಡೆಯುತ್ತಾರೆ. ವರ್ತಮಾನಕಾಲದಲ್ಲಿ ಕೃಷಿಕರು ಕೊಡುವುದರ ಯಾವುದಕ್ಕೂ ಸಾಲುವುದಿಲ್ಲ. ಅದಕ್ಕಾಗಿಯೇ ಅವರ ವಾರ್ಷಿಕ ವರಮಾನ ಗ್ರಾಮದಲ್ಲಿ ಎರಡು ಚೀಲ ಅಥವಾ ಮೂರು ಚೀಲ ಜೋಳ ಇದ್ದರೆ ಇತರದ್ದಕ್ಕೆ ಏನು ಮಾಡಬೇಕೆಂಬುದು ಕೇಳಿದರೆ ಅವರ ಮನೆಯಲ್ಲಿನ ಮಹಿಳೆಯರು ರೈತರ ಕೂಲಿ ಕೆಲಸಕ್ಕೆ ಹೋಗುತ್ತಾರೆ. ಆದುದರಿಂದ ಜೀವಿಸಲಿಕ್ಕೆ ಸಾಧ್ಯವಿದೆ. ಬರುವ ಆದಾಯ ವರ್ಷಕ್ಕೆ ಎರಡು ಮೂರು ಚೀಲ ಜೋಳ, ಆಯ ಇಲ್ಲದವರು ಒಂದು ಗಿದ್ನ ಅಥವಾ ಒಂದು ಪಡಿ ಹೀಗೆ ಜೋಳವನ್ನು ಕೊಟ್ಟು ಕೆಲಸವನ್ನು ಮಾಡಿಸಿಕೊಳ್ಳುತ್ತಾರೆ. ಆಯದಿಂದ ಬಡಗಿಯರಿಗೆ ಲಾಭಇಲ್ಲ. ಮತ್ತೇಕೆ ಮಾಡುತ್ತಾರೆಂದರೆ ಹಿಂದಿನಿಂದಲೂ ನಡೆಸಿಕೊಂಡು ಬಂದಿದ್ದರಿಂದಲೇ ಅದನ್ನು ಬಿಡಬಾರದು ಎಂದು ಹೇಳುತ್ತಾರೆ.

ಆ ಕಾಲದಲ್ಲಿ ಒಂದು ಹೊಸದಿಂಡು ಕೆತ್ತಿ ಹಾಯಿಸಿ ಕೊಡುವುದಕ್ಕೆ ೮ ಮೌನ ಜೋಳವನ್ನು ಆಯವಾಗಿ ರೈತರು ಸಲ್ಲಿಸುವರು. ಬಂಡಿ ಮಡಿಗೆ ಇತ್ಯಾದಿ ಕೆಲಸಗಳಿಗೆ ಕೂಲಿ ಕೊಡುವರು. ಬಂಡಿ ಮಾಡುವುದಕ್ಕೆ ೧೦೦೦ ರೂಪಾಯಿ ನೇಗಿಲು ಮಾಡುವುದಕ್ಕೆ ೩೫ ರೂಪಾಯಿ ಹೀಗೆ ಬಡಗಿಯರು ತಮ್ಮ ಕೆಲಸಕ್ಕೆ ಪ್ರತಿಯಾಗಿ ಜೋಳ, ಹಣ, ತೆಗೆದುಕೊಳ್ಳುವ ಪದ್ದತಿ ಇತ್ತು.

ಇವರಿಗೆ ಬರುವ ಆದಾಯಕ್ಕಿಂತ ನಷ್ಟವೇ ಹೆಚ್ಚು ಬರುವ ಆದಾಯ ೫೦೦೦ ಇದ್ದರೆ ನಷ್ಟ ೨೦೦೦ ರಷ್ಟು ಆಗಿರುತ್ತದೆ. ಏಕೆಂದರೆ ಇವರು ಆಚಾರ, ವಿಚಾರ, ಜೀಗರು, ಬಿಜ್ಜರು ಎಂದು ಅನಾವಶ್ಯಕವಾದ ಖರ್ಚು ಮಾಡುತ್ತಿರುತ್ತಾರೆ. ದೇವರು ದಿಂಡರ ಪೂಜೆ, ಸತ್ಯನಾರಾಯಣ, ವಿಶ್ವಕರ್ಮ ಪೂಜೆ ಎಂಬ ಹೆಸರಿನಿಂದಲೂ ಇವರಿಗೆ ಕಡಿಮೆ ಆಗುತ್ತದೆ. ವರ್ಷಕ್ಕೆ ಆಯ ದ ರೂಪವಾಗಿ ೨-೩ ಚೀಲ ಜೋಳ ಬಂದರೆ ಒಂದು ಚೀಲ ಕಡವಾಗಿ ತೆಗೆದುಕೊಂಡಿರುತ್ತಾರೆ. ಅದನ್ನು ಕೆಲಸ ಮಾಡುತ್ತಾ ತೀರಿಸುತ್ತಾರೆ.

ಬಡಗಿಯರು ರೈತರನ್ನೇ ಆಶ್ರಯಿಸಿ ಬದುಕುವವರಾಗಿರುತ್ತಿದ್ದರು. ಇವರು ಕೊಡುವ ಧಾನ್ಯಗಳಿಂದಲೇ ಇವರ ಜೀವನೋಪಾಯ ನಡೆಯುತ್ತಿತ್ತು. ಒಬ್ಬ ರೈತ ವರ್ಷಕ್ಕೆ ೬೦ ಸೇರು ಜೋಳ (ಆಯಗಾರರಾದರೆ)

ಒಂದು ಕೂರಿಗಿ ದಿಂಡಿಗೆ....... ೮ ಮೌನ,
ಕುಂಟಿ ದಿಂಡಿಗೆ................. ೪ ಮೌನ,
ಎಡೆಕುಂಟೆ.................. ೧ ಮೌನ,
ನೇಗಿಲಿಗೆ.............. ೨ ಮೌನ,

ಇತರ ಸಣ್ಣಪುಟ್ಟ ಕೆಲಸ ಲೆಕ್ಕಕ್ಕಿಲ್ಲ. ಮೌನ ಗಿದ್ನ, ಪಡಿ ಎನ್ನುವುದ ಪ್ರಾದೇಶಿಕವಾಗಿ ಬಳಸುವ ಶಬ್ದವಾಗಿದೆ. ಇವು ಎಲ್ಲಾ ಪದದ ಅರ್ಥ ಒಂದೆ. ಅಳತೆ ಕೂಡ ಒಂದೇ ಆಗಿರುತ್ತದೆ. ಒಂದು ಮೌನಕ್ಕೆ ೪ ಸೇರು ಎಂದು ತಿಳಿದು ಬರುತ್ತದೆ.

ಹೀಗೆ ಅವರು ಬಳಸುವ ಮೌನವಾಗಿದೆ. ಎಂದು ಹೇಳಬಹುದು. ಇದು ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಕಾಣಬಹುದು. ವರ್ತಮಾನಕ್ಕೆ ಹೋಲಿಸಿದರೆ ಅವು ತನ್ನ ಅಸ್ಥಿತ್ವವನ್ನು ಕಳೆದುಕೊಳ್ಳುತ್ತಾ ಬಂದಿವೆ. ಇಂದು ಆಯವನ್ನು ಯಾರು ಅನುಸರಿಸುತ್ತಿಲ್ಲ. ಬದಲಾಗುತ್ತಿರುವ ಸಾಮಾಜಿಕ ಬೆಳವಣಿಗೆಯಲ್ಲಿ ಆಯಗಾರರಿಗೆ ಅದು ಸಾಕಾಗುವುದಿಲ್ಲ. ಜೊತೆಗೆ ರೈತರೂ ಕೂಡ ಆಗಿಂದಾಗ್ಗೆ ಹಣ ಕೊಟ್ಟು ಕೆಲಸ ಮಾಡಿಸುತ್ತಾರೆ. ಏಕೆಂದರೆ ನಿಸರ್ಗ ಇಂದು ಕಣ್ಣಾಮುಚ್ಚಾಲೆಯಾಟ ಆಡುವುದರಿಂದ ಅವರಿಗೆ ಸಾಲದಿದ್ದಾಗ ಏನು ಮಾಡುತ್ತಾರೆ. ಅವರು ಬೆಳೆದ ಕಾಳುಕಡಿ ಅವರಿಗೆ ಸಾಲದು ಎಂಬುದನ್ನು ನಾವು ನೋಡಬಹುದು.

ಇವರು ಬಡಗಿತನದಿಂದ ಅಂದರೆ ಕೃಷಿಕರ ಆದಾಯದಿಂದಲೇ ಜೀವಿಸುತ್ತಿದ್ದವರು ನಂತರ ಇವರ ಆರ್ಥಿಕ ಬೆಳವಣಿಗೆ ಕುಂಠಿತಗೊಳ್ಳುತ್ತಾ ಅಭದ್ರ ಸ್ಥಿತಿಗೆ ಸಿಲುಕಿದ್ದಾರೆ. ಆಕಾರಣಕ್ಕೆ ಬದಲಾಗುತ್ತಿರುವ ಕಾಲದಲ್ಲಿ ಬಡಗಿತನ ವೃತ್ತಿಯ ವೈಪರಿತ್ಯಗಳು ಕಂಡು ಬಂದುದನ್ನು ನಾವು ಕಾಣಬಹುದು. ಆ ವೈಪರಿತ್ಯಗಳನ್ನು ಈ ಕೆಳಗಿನಂತೆ ಕಾಣಬಹುದು.

★ ಅಂದು ಯತೇಚ್ಚವಾಗಿ ಬೆಳೆಯುತ್ತಿರುವುದರಿಂದ ಆಯಗಾರರಿಗೆ ಸಾಕಾಗುವಷ್ಟು ಕೊಡುತ್ತಿದ್ದರು. ಆರ್ಥಿಕ ಪರಿಸ್ಥಿತಿ ಚೆನ್ನಾಗಿತ್ತು. ಆದರೆ ಈಗ ಮಳೆಯು ಸರಿಯಾದ ಕಾಲಕ್ಕೆ ಬರದೇ ರೈತರು ಬೆಳೆಯದಿದ್ದಾಗ ಆಯಗಾರಿಕೆ ಕಡಿಮೆಯಾಗುತ್ತಾ ಬಂದಿತು.

★ ಕೃಷಿ ಬೆಳವಣಿಗೆಯು ಬದಲಾವಣೆಯನ್ನು ಹೊಂದಿವೆ. ಅಂದರೆ ಕಟ್ಟಿಗೆ ಉಪಕರಣಗಳನ್ನು ಬಳಸುತ್ತಿದ್ದವರು ಆಧುನಿಕ ಕಾಲದಿಂದಾಗಿ ಉಪಕರಣಗಳು ಯಂತ್ರಗಳಿಂದ ತಯಾರಿಸಿದರೆ ಸಿದ್ದಪಡಿಸಿದ ವಸ್ತುಗಳು ಕಬ್ಬಿಣದ ವಸ್ತುಗಳು ಬೇಕೆಂದಾಗ ಸಿಗುವುದರಿಂದ ಹಳೆಯ ಕಾಲದ ವಸ್ತುಗಳನ್ನು ಬಳಸುವುದನ್ನು ಕಡಿಮೆ ಮಾಡಿದರು.

★ ಉಪಕರಣಗಳ ಬದಲಾಗಿ ಅಂದರೆ ಕೂರಿಗೆ ಬದಲಾಗಿ ಸೀಡ್ ಡ್ರಿಲ್‌ನ್ನು ಬಳಸುವ ಯಂತ್ರ, ಬಂದಿರುವಾಗ ಹಳೆಯದನ್ನು ಬಿಡಿಗೊತ್ತಿದ್ದರಿಂದ ಬಡಗಿಯರ ಜೀವನಕ್ಕೆ ತೊಂದರೆ ಬಂದಿರುವ ಲಕ್ಷಣ

ನೋಡಬಹುದು.

★ ರೈತರಿಂದ ಜೀವಿಸುತ್ತಿದ್ದ ಬಡಗಿಯರು ಅನಿವಾರ್ಯವಾಗಿ ಆಯಗಾರಿಕೆಯಿಂದ ಹೊರ ಬರಬೇಕಾಯಿತು. ಅಥವಾ ಕೂಲಿ ಕೆಲಸಕ್ಕೆ ಹೋಗುವ ಪರಿಸ್ಥಿತಿ ಬಂದೊದಗಿತು.

★ ಮರಗಳನ್ನು ಕಂಡುಕೊಳ್ಳುವ ಯೋಗ್ಯತೆ ಇಲ್ಲದಿರುವುದು.

★ ರೈತರು ಸಾಗಾಣಿಕೆ ಮಾಡಲು ಬಂಡಿಯ ಬದಲಾಗಿ ವಾಹನ ಬಳಸುತ್ತಿದ್ದಾರೆ. ಆಗ ಬಂಡಿಯೇ ವಾಹನವಾಗಿತ್ತು. ಅದನ್ನು ತಯಾರು ಮಾಡುವವನು ಬಡಗಿಯು ವಾಹನದಂತಹ ಈ ಯಂತ್ರೋಪಕರಣದಿಂದ ಅವರ ಆರ್ಥಿಕ ಸ್ಥಿತಿ ಹದಗೆಡುತ್ತಾ ಬಂತು.

★ ಇವರು ಅಧಿಕ ವೆಚ್ಚದ ಯಂತ್ರಗಳು ಹಾಗೂ ಸಲಕರಣೆಗಳನ್ನು ಮೇಲೆ ಅಧಿಕ ಬಂಡವಾಳವನ್ನು ತೊಡಗಿಸುವ ಶಕ್ತಿಯಿಲ್ಲ.

★ ಬಡಗಿ ವೃತ್ತಿಯನ್ನು ಇನ್ನೂ ಹಲವಾರು ಸಮುದಾಯದವರು ಮಾಡುವುದನ್ನು ಕಲಿತುಕೊಂಡಿದ್ದರಿಂದಲೂ ಇವರ ವೈಪರೀತ್ಯಕ್ಕೆ ಕಾರಣವೂ ಹೌದು.

★ ಮರಗಳು ತುಂಬಾ ಬೆಲೆ ಬಾಳುವುದರಿಂದ ಇವರ ವೈಪರಿತ್ಯಕ್ಕೆ ಕಾರಣ.

ಇನ್ನು ಹಲವಾರು ಕಾರಣಕ್ಕಾಗಿ ಬದಲಾಗುತ್ತಿರುವ ಕಾಲದಲ್ಲಿ ಬಡಗಿತನ ವೃತ್ತಿಯ ವೈಪರಿತ್ಯಗಳಾಗಿವೆ ಎಂದು ಹೇಳಬಹುದು. ಹೀಗೆ ನಗರಗಳಿಗೆ ವಲಸೆ ಹೊಗುವುದನ್ನು ನಾವು ಕಾಣಬಹುದಾಗಿದೆ.

ಬಡಗಿ ವೃತ್ತಿಯು ಇಂದು ಆಧುನಿಕ ಬೆಳವಣಿಗೆಯಿಂದ ಬದಲಾವಣೆಯನ್ನು ಹೊಂದಿರುವುದು ಬಡಗಿತನ ನಶಿಸುವ ಮಾರ್ಗದಲ್ಲಿರುವಾಗ ಅವುಗಳಿಗೆ ಪರಿಹಾರ ಸಾಧ್ಯವೇ ಆಗದಂತೆ ಹೇಗೆ ಬಡಗಿಗಳನ್ನು ಬಲಪಡಿಸಲು ಸಾಧ್ಯತೆಗಳಿವೆಯೇ ಎಂಬ ಪ್ರಶ್ನೆ ಎದುರಾಗುವುದು ಸಹಜ.

**೬.೪. ಬಡಗಿಗಳನ್ನು ಬಲಪಡಿಸುವ ಸಾಧ್ಯತೆಗಳು :**

ಆಧುನಿಕ ಕಾಲದಿಂದ ಜರ್ಜರಿತವಾಗಿರುವ ಬಡಗಿಗಳಿಗೆ ಬಲಪಡಿಸಬೇಕಾದರೆ,

★ ವಿದೇಶಿ ವಸ್ತುಗಳನ್ನು ಬಹಿಷ್ಕರಿಸಿ ಸ್ವದೇಶಿಯ ವಸ್ತುಗಳನ್ನು ಖರೀದಿಸುವುದು.

★ ದೇಶೀಯ ತಂತ್ರಜ್ಞಾನಗಳಿಗೆ ಮಾನ್ಯತೆ ಕೊಡುವುದು.

★ ಮರಗಳು ಶ್ರೀಮಂತರಿಗೆ ಮೀಸಲಾಗದೇ ಬಡವರಿಗೂ ಸಿಗವಂತೆ ಮಾಡುವುದು.

★ ಕರಕುಶಲ ಕರ್ಮಿಗಳಿಗೆ ಅಥವಾ ಸಣ್ಣ ಉತ್ಪಾದಕರಿಗೆ ಮಾರ್ಗದರ್ಶನ ಒದಗಿಸುವುದಕ್ಕಾಗಿ ಕೇಂದ್ರ ಸಣ್ಣ ಕೈಗಾರಿಕೆಗಳ ಸಂಸ್ಥೆಯೊಂದನ್ನು ಸ್ಥಾಪಿಸುವುದು.

★ ರಾಷ್ಟ್ರೀಯ ಸಣ್ಣ ಕೈಗಾರಿಕೆಗಳ ನಿಗಮವು ಕೈಗಾರಿಕಾ ಪ್ರದೇಶಗಳನ್ನು ನಿರ್ಮಿಸಿ ದೇಶೀಯ ಕೈಗಾರಿಕೆಗಳಿಗೆ ಕೈಗಾರಿಕಾ ಮಳಿಗೆಗಳನ್ನು ಕಟ್ಟಿಸಿ ಆಶ್ರಯ ಒದಗಿಸಲು ಪ್ರಯತ್ನಿಸಬೇಕು.

★ ಕಚ್ಚಾ ವಸ್ತುಗಳು ಅಂದರೆ ಕಟ್ಟಿಗೆ ಸುಲಭವಾಗಿ ಸಿಗುವಂತೆ ಮಾಡಬೇಕು.

★ ಇವರಿಗೆ ಕೈಗಾರಿಕೆಗಳ ಉತ್ಪನ್ನಗಳಿಗೆ ಮಾರುಕಟ್ಟೆಯ ಸೌಲಭ್ಯವನ್ನು ಒದಗಿಸಬೇಕು.

★ ಬಡಗಿತನ ವೃತ್ತಿಗೆ ಹಣಕಾಸಿನ ನೆರವನ್ನು ಒದಗಿಸಲು ಹಲವಾರು ಸಂಘ ಸಂಸ್ಥೆಗಳು

ಸಹಕಾರಿಯಾಗಬೇಕು. ಅಂದರೆ ಆರ್ಥಿಕ ಸಹಾಯ ನೀಡಬೇಕು.

★ ಸರ್ಕಾರಗಳು ತರಬೇತಿ ಸಂಸ್ಥೆಗಳಿಂದ ಇವರನ್ನು ಬಲಪಡಿಸಬಹುದು.

★ ತಾಂತ್ರಿಕ ಸೌಲಭ್ಯವನ್ನು ಒದಗಿಸಬೇಕು.

★ ರಾಜಕೀಯ, ಸಾಮಾಜಿಕ, ಆರ್ಥಿಕ, ಸ್ಥಾನಮಾನ ನೀಡಬೇಕು.

ಹೀಗೆ ಸರ್ಕಾರಗಳು, ಸಂಘಸಂಸ್ಥೆಗಳು ಇವರ ಅಭಿವೃದ್ಧಿಗೆ ಹಲವಾರು ಕ್ರಮಗಳನ್ನು ಕೈಗೊಂಡರೆ ಅವರನ್ನೇ ಬಲಪಡಿಸುವುದರಲ್ಲಿ ಸಂದೇಹನೇ ಇಲ್ಲ.

## ೬.೫. ಬಡಗಿ ಕಟ್ಟಿಗೆ ನೋಡುವ ಬಗೆ:

ಕುಶಲಕರ್ಮಿಗಳ ತಾವು ಉಪಯೋಗಿಸುವ ಕಚ್ಚ ವಸ್ತುವನ್ನು ವಿಭಿನ್ನ ರೂಪದಲ್ಲಿ ನೋಡುತ್ತಾರೆ. ಇದು ಎಲ್ಲಾ ಕಸಬುದಾರರಿಗೂ ಸಂಬಂದ ಪಟ್ಟಿರುತ್ತದೆ ರೈತ ಮಣ್ಣನ್ನೇ ನೋಡುವ ಬಗೆ ಬೇರೆ ವಡ್ಡರು ಅಥವಾ ಮನೆಕಟುವವನು ನೋಡುವ ಬಗೆಗೂ ವಿಭಿನ್ನತೆಯನ್ನು ಹೊಂದಿರುತ್ತಾರೆ. ರೈತರು ಮಣ್ಣನ್ನೇ ದೇವರ ರೂಪದಲ್ಲಿ ಅಥವ ಅನ್ನದ ರೂಪದಲ್ಲಿ ನೋಡುವ ಬಗೆ ಕಾಣುತ್ತೇವೆ. ವಡ್ಡರು ಮಣ್ಣನ್ನು ದೇವರ ರೂಪದಲ್ಲಿ ನೋಡುವುದಿಲ್ಲ, ಒಂದು ಕಚ್ಚವಸ್ತುವಾಗಿ ನೋಡುವುದನ್ನು ಕಾಣುತ್ತೇವೆ. ಕುಂಬಾರನು ಕೂಡ ತನ್ನದೇ ಆದ ದೃಷ್ಠಿಯಿಂದ ನೋಡುತ್ತಾನೆ. ಆಯಾ ಕಸಬುದದಾರು ತಮ್ಮ ತಮ್ಮ ಉಪಕರಣಗಳ ತಯಾರಿಸಲು ಬಳಸುವ ಉಪಕರಣಗಳನ್ನು ದೇವಿ ರೂಪದಲ್ಲಿ ನೋಡುತ್ತಾನೆ ಹಾಗೆ ಬಡಗಿಯು ಕೂಡ ಕಟ್ಟಿಗೆಯನ್ನು ಕಚ್ಚರೂಪದ ಈ ಕಟ್ಟಿಗೆ ಆಯಾ ಉಪಕರಣವನ್ನು ತಯಾರಿಸಲು ಬರುತ್ತದೆಯೇ ಮತ್ತು ಇಲ್ಲವೋ ಅದರ ಸುಳಿವು ಆಧಾರದ ಮೇಲೆ ಕಟ್ಟಿಗೆಯ **ಆಯುಷ್ಯವನ್ನು** ನೋಡುತ್ತಾರೆ. ಅದನ್ನು ಒಂದು ವಸ್ತುವಾಗಿ ಮೊದಲು ಪರಿಗಣಿಸುತ್ತಾರೆ. ಅದನ್ನು ನಿಷ್ಠರೂಪದಲ್ಲಿ ನೋಡುತ್ತಾರೆ. ಬಡಗಿಗಳು ಮತ್ತು ಕಮ್ಮರಿಕೆಗಳು ವಿನ್ಯಾಸವನ್ನು ಮಾಡುವಾಗ ಮಾಡುವನು ಆ ವಸ್ತುವನ್ನು ಮಾಡಿಸುವುವವನ ದೃಷ್ಠಿಯಲ್ಲಿ ದೈವ ಭಕ್ತಿ ಇರಬಹುದು, ಮಾಡುವವನು ಆ ವಸ್ತು ಅವನು ಹೇಳುವ ಪರಿಕಲ್ಪನೆ ದೃಷ್ಠಿಯಲ್ಲಿ ನೋಡಬೇಕಾಗುತ್ತದೆ.

ಉಪಕರಣವನ್ನು ರಚನೆ ಮಾಡುವ ಕಾಲಕ್ಕೆ ಮೂಲರೂಪದ ಹಂತಕ್ಕೆ ಬಂದಾಗ ಯಾರು ಯಾವಸ್ತುವನ್ನು ಹೇಳುತ್ತಾರೋ ಆ ದೃಷ್ಠಿ ಮುಗಿಯವವರೆಗೂ ಅದನ್ನು ಅವರು ಒಂದು ವಸ್ತುರೂಪವಾಗಿ ನೋಡುವುದಿಲ್ಲ. ಒಂದು ಉಪಕರಣ ಮತ್ತು ಶಿಲ್ಪಿಯನ್ನು ಮಾಡುತ್ತಾರೆಂದರೆ ಅವರು ಆ ಕಚ್ಚವಸ್ತುವನ್ನು ತಮ್ಮ ಕಾಲುಗಳಿಂದ ತುಳಿದು ಮತ್ತು ಅದರ ಮೆಲೆನಿಂತು ಮಾಡುವ ಸಂದರ್ಭ ಬರುತ್ತದೆ. ಆಗ ದೈವೀ ರೂಪದಲ್ಲಿ ನೋಡಿದರೆ ಆ ವಸ್ತು ಒಂದು ರೂಪವಾಗಿ ತಯಾರಿಸಲು ಸಾಧ್ಯವಾಗುವುದಿಲ್ಲ. ಅದಕ್ಕೆ ದೈವ ಭಾವನೆಯಿಂದ ಅವರು ನೋಡುವುದಿಲ್ಲ. ವಿಶ್ವಕರ್ಮರಾದವರು ದಿನನಿತ್ಯದ ಆಚಾರ ವಿಚಾರ ಪೂಜೆ -ಪುನಾಸ್ಕಾರಗಳನ್ನು ಮುಗಿಸಿಯೇ ಈ ಕೆಲಸಕ್ಕೆ ಕೈಹಾಕುತ್ತಾರೆ. ಒಂದು ವೇಳೆ ಆಚಾರ ಮಾಡದಿದ್ದರೆ ಅವನು ವಿಶ್ವಕರ್ಮ ಕುಲಕ್ಕೆ ಕಳಂಕ ತರುತ್ತಾರೆ ಕೆಲಸಮಾಡುವ ಸಂದರ್ಭದಲ್ಲಿ ಕಾಳಿಕಾದೇವಿಯನ್ನು ಸ್ಮರಿಸಿಕೊಂಡು ಕೆಲಸ ಪ್ರಾರಂಭಮಾಡುತ್ತಾರೆ.

ವಸ್ತು ಮತ್ತು ಬಡಗಿ ಮಾಡುವ ಕರ್ಮ ಅಂದರೆ ಕೆಲಸವು ಅವಿನಾಭಾವ ಸಂಬಂಧ ಇರುತ್ತದೆ. ಕೆಲಸ ಪ್ರಾರಂಭದಲ್ಲಿ ದೈವೀ ಭಾವನೆ ಇದ್ದರೂ ಕೆಲಸ ಮಾಡುವಾಗ ಸುಪ್ತ, ಚೇತನದರೂಪದಲ್ಲಿ

ಇರುತ್ತದೆಯೇ ವಿನಹ ಮಾನಸಿಕ ಭಾವನೆ ಇರುವುದಿಲ್ಲ. ಒಂದು ವಸ್ತುವನ್ನು ತಯಾರಿಸಿದ ಮೇಲೆ ಅದಕ್ಕೆ ದೈವ ಭಾವನೆಯಿಂದ ನೋಡುವ ದೃಷ್ಟಿ ಬರುತ್ತದೆ.

ಉದಾಹರಣೆಗೆ ಕೂರಿಗಿಯನ್ನು ತಯಾರಿಸುವಾಗ ಅದನ್ನು ಒಂದು ವಾಸ್ತುವಿನರೂಪದಲ್ಲಿ ನೋಡಿದರೆಮಾತ್ರ ಈ ಉಪಕರಣ ತಯಾರಾಗುತ್ತದೆ. ತಯಾರಾದ ನಂತರ ಅದನ್ನು ಊರಿನ ಕುರುಬರೇ ಪೂಜೆಮಾಡುವಾಗ ಯಾರಾದರು ಕಾಲಿಂದ ತುಳಿದರೆ ಅವರನ್ನು ಲೇ ಅದನ್ನು ತುಳಿಬಾರದು ಅದು ದೇವರಿದ್ದಾಗೆ ಎಂದು ಹೇಳುವ ಪ್ರಸಂಗಗಳು ಇವೆ ಆಗ ಇಬ್ಬರ ಭಾವನೆಗಳು ಒಂದೇ ಆಗುತ್ತವೆ.

## ೭. ಪಾಂಚಾಳ ಜಾನಪದ :

ಎಲ್ಲಾ ಸಮುದಾಯಗಳಿಗೂ ತಾವು ಉಪಯೋಗಿಸುವ ಉಪಕರಣಗಳು ಸಂಬಂದಿಸಿದಂತೆ ಜಾನಪದ ಇರುತ್ತದೆ. ಇಲ್ಲಿ ಪಾಂಚಾಳ ಜಾನಪದ ಎಂದರೆ ಪಾಂಚಾಳರಲ್ಲಿ ಒಬ್ಬರಾದ ಬಡಿಗಿಯರು ಬಳಸುವ ಉಪಕರಣಗಳ ಜಾನಪದ ವೆಂದು ತಿಳಿಯಬೇಕು.

ಇವರು ಬಳಸುವ ಸಾವಮಾನುಗಳು ಆಚಾರ,ವಿಚಾರಗಳು,ನಂಬಿಕೆಗಳು, ವಚನಗಳು, ಕಂಡುಬರುತ್ತವೆ.ಕೆಲಸಮಾಡುವ ಸಂದರ್ಭದಲ್ಲಿ ಯಾವ ಆಚರಣೆಯನ್ನು ಮಾಡುತ್ತಾರೆ. ಕೆಲವುದಿನಗಳಲ್ಲಿ ಕೆಲಸವನ್ನು ಏಕೆ ಮಾಡುವುದಿಲ್ಲ. ಇತ್ಯಾದಿ ನಂಬಿಕೆಗಳನ್ನು ನಾವು ಇಲ್ಲಿ ನೋಡಬಹುದು ಬಾಚಿ, ಉಳಿ, ಕೊಡ್ತಿ, ಬೈರಿಗಿ, ಗೀರುಕಟ್ಟುವ ಕತ್ತು, ಮಿಕ್ಕೆಲ್ಲವುಗಳನ್ನು ಶರ ಲಕ್ಷ್ಮಿ ಯೆಂದು ಕರೆಯುವರು. ಶರ ಎಂದರೆ [illegible] ದೈವ ಎಂದು ಕರೆಯುವರು. ಬಾಚಿ, ಹಿರೆಬಾಚಿ, ಕಟ್ಟಬಾಚಿ, ಬಾಗುಬಾಚಿ ಗಳನ್ನು ಕಾಣಬಹುದು. ಉಳಿಗಳು, ಕಡೆ ಉಳಿ, ಕೀಲು ಉಳಿ, ಅಗಲಂಬುಳಿ, ಇವುಗಳನ್ನು ಅರ್ಧ ಇಂಚಿನಿಂದ ಹಿಡಿದು ನಾಲ್ಕು ಇಂಚಿನ ಉಳಿಗಳಿರುತ್ತವೆ. ಉಗುರುಳಿಯನ್ನು ಕುಸುರಿಕೆಲಸಕ್ಕೆ ಬಳಸಿತ್ತಾರೆ

ಗರಗಸವು ಆಧ್ಯಾತ್ಮಿಕ ಸಂಕೇತವಾಗಿರುತ್ತದೆ. ಗರಗಸದಿಂದ ಕಟ್ಟಿಗೆಯನ್ನು ತುಂಡುಹಾಕುವಾಗ ಅಥವಾ ಕೊರೆಯುವಾಗ ಒಂದು ಸಲ ಹಿಂದಕ್ಕೆ ಹೋಗಿ ಮುಂದಕ್ಕೆ ಹೋದರೆ ಒಂದು ನೂಲು ಕೊರೆಯುತ್ತದೆ. ಅದರಂತೆ ನಮ್ಮ ಹೃದಯದೊಳಗೂ ಗರಗಸ ಇದೆ ಯಾವುದೆಂದರೆ ಶ್ವಾಸ, ಉಚ್ವಾಸ ಒಂದು ಸಲ ಒಳಗೆ ಉಸಿರನ್ನು ಎಳೆದುಕೊಂಡು ತಿರುಗಿ ಉಸಿರನ್ನು ಹೊರಗೆ ಬಿಡುತ್ತವೆ. ಹೇಗೆ ಉಸಿರಾಡುತ್ತೇವೋ ಆ ಶಬ್ದದ ಹಾಗೆ ಗರಗಸದ ಶಬ್ದವನ್ನು ಕೂಡ ಅದೇ ರೀತಿಯಾಗಿ ಬರುತ್ತದೆ ಎಂದು ಹೇಳುತ್ತಾರೆ. ಗರಗಸವು

ಕೊರೆಯುತ್ತಿರುತ್ತದೆ. ನಿಂತರು, ಕುಂತರೂ, ನಿದ್ದೆ ಮಾಡಿದರೂ, ಹೃದಯದ ಗರಗಸ ಕೊರೆದೇ ಕೊರೆಯುತ್ತಿರುತ್ತದೆ. ಆಯುಷ್ಯ ಮೂಗಿತು ಎಂದರೆ ಬಡ್ಡಿ ತುಂಡು ಬೀಳುತ್ತದೆ ಎಂಬುವುದನ್ನು ಮನುಷ್ಯನಿಗೂ ಹುಟ್ಟು ಮರಣಕ್ಕೆ ಹೋಲಿಸಿ ಎಚ್ಚರದಿಂದಿರು ಎಂದು ಅದು ಹೇಳುತ್ತದೆ ಎಂದು ನಂಬಿರುತ್ತಾರೆ.

ಉಪಕರಣಗಳಿಗೆ ಸಂಬಂಧಿಸಿದ ವಚನಗಳನ್ನು ನಾವು ನೋಡಬಹುದು. ಡಾ. ಆರ್. ಸಿ. ಹಿರೇಮಠ್ (ಸಂಕೀರ್ಣ ವಚನ ಸಂಪುಟ: ಮೂರು. ಪುಟ ೮೨)

೪೦೪ನೇವಚನದಬಾಚಿಕಾಯಕದ ಬಸಣ್ಣನ ವಚನ ನೊಡಬಹುದು

1) ಆರು ದರ್ಶನವೆಲ್ಲಾ ಏನ್ನ ಬಾಚಿಯ ಕಲೆ.
ಮಿಕ್ಕಿದ ಮೀರಿದ ಅವದೊತರುಗಳೆಲ್ಲಾ
ಏನ್ನ ಉಳಿಯೊಳ ಗಣ ವೊಡಪು
ಇಂತಿವ ಮೀರಿ ಚೇದಿಸಿ ಬೇದಿಸಿಹೆನೆಂಬುವರೆಲ್ಲ
ಏನ್ನ ಕೊಡತಿ ಯಡಿಯಲ್ಲಿ ಬಡಿಯಿಸಿಕೊಂಬ ಬಡಿಹೊರಿಗಳು

ಏಂದು ಅವರು ಬಳಸಿರುವ ಉಪಕರಣಗಳನ್ನು ಹೆಸಿರಿಸಿ ಅದರ ಮೇಲೆ ನಂಬಿಕೆಯನ್ನ ಇಟ್ಟುಕೊಂಡಿದ್ದಾರೆಂಬುದು ತಿಳಿದು ಬರುತ್ತದೆ.

2) ೨೦೨೧ನೇ ವಚನದಲ್ಲಿ

ಆಶೆಯುರತ ಬಾಚಿಯಲ್ಲಿ ಭವಪಾಶವಿಲ್ಲದ ಜಂಗಮಕ್ಕೆ ತೆತ್ತು
ರೊಷವಿಲ್ಲದ ಉಳಿಯಲ್ಲಿ ನಿಜವಾಸವ ನೊಡಿ ಹುಗಿಲುದೆಗೆ ವುತ್ತ
ಭಾಷೆಗೆ ಊಣಯವಿಲ್ಲದ ಸದ್ಭಕ್ತರ ಆಶ್ರಯಕ್ಕೆ ನಿಜವಾಸವ
ಮಾಡುವ ಕಾಯಕ.
ಈ ಗುಣ ಬಾಚಿಯಬಸವಣ್ಣನ ನೇಮ
.........................................

ಓೀಗೆ ಈ ವಚನಗಳಲ್ಲಿ ಉಪಕರಣಗಳ ಮಹತ್ವವನ್ನು ನಾವು ವಚನಗಳ ಮೂಲಕ ನೊಡ ಬಹುದು ಓೀಗೆ ಉಪಕರಣಗಳನ್ನು ಪಾಂಚಾಳರು ಅನ್ನವೆಂದು, ದೇವತೆ ಎಂದು ಬಾವಿಸುವುದು ಸಹಜವಾಗಿದೆ ಅವುಗಳನ್ನು ಜಾನಪದ ನಂಬಿಕೆಗಳನ್ನು ರೂಡಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಅವುಗಳಿಗೆ ದ್ರೋಹ ಬಗೆದರೆ ಅವರು ಪಾಂಚಾಳರಲ್ಲ ಎಂದು ಹೇಳುತ್ತಾರೆ.

ವಾರ, ತಿಥಿ, ನೇಮಾದಿಗಳುಂಟು . ಇವುಗಳ ಸಮೇತವಾಗಿ ಆಚರಿಸುತ್ತಾರೆ . ಅಮವಾಸ್ಯೆಯ ದಿನ ಈ ವೃತ್ತಿಯನ್ನು ಮಾಡುವದಿಲ್ಲ. ಕಾಳಿಯ ಶುಭದಿನ ವಾದರೂ ಅಮಾವಾಸ್ಯೆಯ ದಿನ ಒಂದು ರೀತಿಯಿಂದ

ಭಯದದಿನವೂ ಹೌದು. ಅದಕ್ಕೆ ಆ ದಿನ ಉಳಿ, ಬಾಚಿ, ಕೊಡ್ತಿಗಳಿಂದ ಮಾಡುವುದರಿಂದ ವಿಷಪು ಗಳಿಗೆಯಾದ ಅಮಾವಾಸ್ಯೆಯ ದಿನ ಕೈಗೆ, ಕಾಲಿಗೆ ಬಡಿದು ನೋವಾಗಬಹುದು ಅದಕ್ಕೆ ಆ ದಿನ ನಂಬಿಕೆ ಇಟ್ಟುಕೊಂಡಿದ್ದಾರೆ. ಆದಿನ ವಿಶೇಷ ದಿನ ಉಪಕರಣಗಳಿಗೆ ಪೂಜೆಮಾಡಿ ಕೆಲಸಕ್ಕೆ ವಿರಾಮವನ್ನು ಕೊಡುತ್ತಾರೆ.

ಸಾಮಾಗ್ರಿಗಳನ್ನು ದಿನ ಬೆಳಗಾದರೆ ಮೈ ತೊಳೆದು ಪುಜೆಮಾಡಿ ಕೆಲಸವನ್ನು ಪ್ರಾರಭಿಸಬೇಕು. ಸುಷುಪ್ತಾವಸ್ಥೆ. ಜಾಗೃತಾವಸ್ಥೆ.
ಸ್ವಪ್ನವಾಸ್ಥೆ ಎಂದು ಮನುಷ್ಯನ ಮೂರು ವ್ಯವಸ್ಥೆಯ ಭಾಗಗಳಾಗಿರುತ್ತವೆ. ಅದರಲ್ಲಿ ಮಾನವರು ರಾತ್ರಿ ನಿದ್ರಾವಸ್ಥೆಯಲ್ಲಿ ಸ್ಕಲನ, ಲೈಂಗಿಕತನದ ಬಯಕೆಗಳು ಅನುಭವಿಸುವುದು ರಾತ್ರಿ ವೇಳೆಯಲ್ಲಿಯೇ. ಅದು ಮೈಲಿಗೆ ಸ್ಥಿತಿಯಾದ್ದರಿಂದ ಬೆಳಿಗ್ಗೆ ಸ್ನಾನ ಮಾಡಿ ಪೂಜೆಯನ್ನು ಮುಗಿಸಿ ಉಪಕರಣಗಳನ್ನು ಮುಟ್ಟಬೇಕು. ಅವು ಕಾಳಿ ಸಮವಾದ್ದರಿಂದ ಮಡಿಯಿಂದ ಕೆಲಸ ಮಾಡಬೇಕು ಎಂಬ ನಂಬಿಕೆ ಇದೆ.

ಇನ್ನು ಕೆಲಸವನ್ನು ಮಾಡುವಾಗ ಮೊದಲು ಕಾಳಿಯನ್ನು ಅಂದರೆ ಉಪಕರಣಗಳು ಮೂರುಸಲ ಬಾಚಿಯನ್ನು ಕೆತ್ತಿ ಉಳಿ, ಕೊಡ್ತಿಯಿಂದ ಪ್ರಾರಂಭಿಸಬೇಕೆಂದಾಗ ಮೂರು ಸಲ ಬಡಿದು ಉಪಕರಣಕ್ಕೆ ನಮಸ್ಕಾರವನ್ನು ಮಾಡಿ ನಂತರ ಕೆಲಸ ಮುಂದುವರಿಸುತ್ತಾರೆ. ಇವುಗಳ ನಾಮದೇವತೆ ಮತ್ತು ಅಂಬಲಿಯನ್ನು ನೀಡುತ್ತವೆ. ಅದಕ್ಕೆ ದ್ರೋಹ ಬಗೆಯಬಾರದು ಎಂದು ನಂಬಿರುತ್ತಾರೆ.

ದಸರಾ ಹಬ್ಬದ ಖಂಡ್ಯಾ ಪೂಜಾ ದಿನ ವಿಶೇಷವಾಗಿ ಆಯುಧ ಪೂಜೆಯನ್ನು ಆಯಾ ಕುಲ ಕಸುಬಿನವರು ತಾವು ಉಪಯೋಗಿಸುವ ಸಲಕರಣೆಗಳನ್ನು ಪೂಜೆ ಸಲ್ಲಿಸುತ್ತಾರೆ. ಅದರಂತೆ ಪಂಚಾಳರು ಕೂಡ ಆಯುಧ ಪೂಜೆಯನ್ನು ಮಾಡುತ್ತಾರೆ. ಆ ದಿನ ಎಷ್ಟೇ ಕೊಟ್ಟರೂ ಸಾಮನುಗಳನ್ನು ಮುಟ್ಟುವುದಿಲ್ಲ. ಕಾರಣ ಪಾಂಡವರು ವನವಾಸದಿಂದ ಬಂದು ಬನ್ನಿ ಮಹಾಂಕಾಳಿಯಲ್ಲಿದ್ದ ಆಯುಧಗಳನ್ನು ಪೂಜೆ ಮಾಡಿ ಅವುಗಳನ್ನು ತೆಗೆದುಕೊಳ್ಳುತ್ತಾರೆ. ಆ ಕಾರಣಕ್ಕಾಗಿ ಎಲ್ಲಾ ವೃತ್ತಿಕಾರರು ಆಯುಧ ಪೂಜೆಯನ್ನು ಮಾಡುತ್ತಾರೆ. ಅವುಗಳನ್ನು ಅಂದು ನೀರಿನಿಂದ ತೊಳೆದು ಕುಂಕುಮ, ವಿಭೂತಿ, ಅರಿಶಿಣ ಹಚ್ಚಿ ಉದ್ದಿನಕಡ್ಡಿ ಬೆಳಗಿ ತೆಂಗಿನಕಾಯಿ ಹೊಡೆಯುತ್ತಾರೆ. ಇನ್ನು ವಿಶೇಷವೆಂದರೆ ಆ ಸಾಮಾಗ್ರಿಗಳಿಗೆ ಕುಂಬಳಕಾಯಿಯನ್ನು ಹೊಡೆದು ಅದರ ತುಂಬಾ ಕುಂಕುಮವನ್ನು ಹಾಕುತ್ತಾರೆ. ಯಾಕೆಂದರೆ ಅವುಗಳಿಗೆ ಪ್ರಾಣಿಗಳ ಬದಲಾಗಿ ಆಯುಧಗಳಿಗೆ ಬಲಿಯನ್ನು ಕೊಡುತ್ತಾರೆಂದು ಹಿರಿಯರು ಹಿಂದಿನಿಂದಲೂ ಬೆಳೆಸಿಕೊಂಡು ಬಂದಿದ್ದಾರೆ.

ಠೊಕ್ ಅಂದ್ರೆ, ಅಕ್ಕಿಬಾನು ಎಂಬ ಗಾದೆಮಾತು ಇವರ ಜೀವನೋಪಾಯವನ್ನು ತಿಳಿಸುತ್ತದೆ. ಇದರಲ್ಲಿ ಉಪಕರಣವು ಅಡಗಿದೆ ಠೊಕ್ ಅಂದರೆ ಕೊಡ್ತಿಯಿಂದ ಬಡಿಯುವ ಶಬ್ದ ಅದರಿಂದ ಬಡಿದರೆ ಇವರಿಗೆ ಅಕ್ಕಿಬಾನು ಎಂಬುದನ್ನು ತಿಳಿಸುತ್ತದೆ. ಹಾಗೆಯೇ ಕೆತ್ತುವವರ ಮುಂದೆ ನಿಲ್ಲಬಾರದು. ಬಡಿಯುವವನ ಹಿಂದೆ ನಿಲ್ಲಬಾರದು ಎಂದು ಗಾದೆಯೂ ಕೂಡ ಇದೆ. ಹಾಗೆಯೇ ಬಾಚಿಯಿಂದ ಕೆತ್ತುವುದು ಮುಂದಿನಿಂದ ಬಡಿಯುವುದು ಹಿಂದಿನಿಂದ ಕೊಡ್ತಿಯಿಂದ ಅವು ಅವರಿಗೆ ಬಡಿಯುವ ಸಂಭವ ಇರುತ್ತದೆ. ಬಾಚಿ ಎರಡು ಅಕ್ಷರದ ಅರ್ಥ ಎಂದರೆ ಬಾ ಎಂದರೆ ಬರುವುದು, ಚಿ ಎಂದರೆ ಚೀಮಾರಿ ಹಾಕಿ ತೆಗೆಯುವುದು

ಎಂಬರ್ಥ. ಬಡಿಗಿ ಹೂಚಿಯನ್ನು ಬಾ ಎಂದು ಕರೆದ ಪೆಚ್ಚು ಇದ್ದುದನ್ನು ಚೀಮಾರಿ ಕೆತ್ತುವುದರಿಂದ ಬೇಡವಾದುದು ಹೊರ ಬರುತ್ತದೆ ಎಂದು ಹೇಳುತ್ತಾರೆ.

ಕೊಡ್ತಿ ಮತ್ತು ಉಳಿ : ಬೇಕಾದುದನ್ನು ಉಳಿಸಿ ಬೇಡವಾದುದನ್ನು ಹೊರದೆಗೆಯುತ್ತಾರೆ. ಅದಕ್ಕೆ ಕೊಡ್ತಿಯಿಂದ ಕೊಡ್ತಿನಿ ನೋಡು ಈಗ ಬೇಗ ಹೊರ ಹೋಗು ಎಂಬ ನಂಬಿಕೆ ಇದೆ.

ಕೆಲಸ ಮಾಡುವಾಗ ಉಪಕರಣಗಳನ್ನು ಕಾಲಿನಿಂದ ತುಳಿಯಬಾರದು. ಸಮಯ ಇದ್ದಂಗೆ ಕಾಲು ಮೆಟ್ಟಿ ಕೆಲಸ ಮಾಡುತ್ತಾರೆ. ಅನಾವಶ್ಯಕವಾಗಿ ಕಾಲಿಕೆ ಬಿಡದರೆ ಅವುಗಳನ್ನು ನಮಸ್ಕಾರ ಮಾಡುತ್ತಾರೆ. ಕಾರಣ ಅವುಗಳು ಮೃತ ಸ್ವರೂಪವನ್ನು ಅವರು ಅವುಗಳಲ್ಲಿ ಕಾಣುತ್ತಾರೆ. ಏಕೆಂದರೆ ಕಾಳಿ ಮಾತೆಯನ್ನು ಎಷ್ಟು ಕಾಪಾಡುತ್ತಾರೋ ಎಷ್ಟು ಸಾರಿ ನಮಸ್ಕಾರ ಮಾಡುತ್ತಾರೋ ಒಂದು ಸಲ ನಮಸ್ಕಾರ ಮಾಡಿದರೆ ಫಲ ದೊರೆಯುತ್ತದೆ ಎಂಬುದನ್ನು ಈ ವಾಕ್ಯಗಳಲ್ಲಿ ಕಾಣಬಹುದು.

ಭೂ ಪ್ರದರ್ಶನ ಷಷ್ಟೇನಾ ।
ಕೇತು ಸ್ನಾನ ಶತರ್ಯುಷ್ಯ ।
ಕಾಶಿಯಾತ್ರಿ ಇತೇನಿಚಾ ।
ತಾಸ್ಮಸ್ ಥ್ಮಾತೃ ವಂದನಾರ್ಥ್ ।

ಎಂಬಂತೆ ಒಂದು ಸಲ ನಮಸ್ಕಾರ ಮಾಡಿದರೆ ಆರು ಸಾರಿ ಭೂ ಪ್ರದರ್ಶನ ಮಾಡಿದಷ್ಟು ಫಲ, ನೂರು ಸಾರಿ ಸಮುದ್ರ ಸ್ನಾನ ಮಾಡಿದಷ್ಟು ಪವಿತ್ರವಾಗಿರುವ ಫಲ, ನಂತರ ಪದೇ ಪದೇ ಕಾಶಿಯಾತ್ರೆ ಮಾಡಿದಷ್ಟು ಫಲವು ಈ ಕಾಳಿ ಮಾತೆಯನ್ನು ವಂದಿಸಿದರೆ ಇವೆಲ್ಲವುಗಳ ಫಲ ದೊರೆಯುತ್ತದೆ ಎಂಬ ವಿಶ್ವಾಸವನ್ನು ಉಪ ನಯನ ಸಂದರ್ಭದಲ್ಲಿ ಗುರುಗಳು ಬೋಧಿಸುತ್ತಾರೆ. ನಮ್ಮ ನಮ್ಮ ಆಚರಣೆಗಳು ನಮ್ಮನ್ನು ಕಾಪಾಡುತ್ತವೆ ಎಂದು **ಹಂಸನಂದಾಚಾರ್ಯ** ತಿಳಿಸುತ್ತಾರೆ.

ನಾನು ಸಣ್ಣವನಿದ್ದಾಗ ಒಂದಿನ ನಮ್ಮ ತಂದೆಯ ಜೊತೆಗೆ ಕೆಲಸ ಮಾಡುತ್ತಿದ್ದಾಗ ಅಕಸ್ಮಾತಾಗಿ ಉಳಿಯನ್ನು ತುಳಿದು ಒಳಗೆ ಹೋದೆ. ಅದನು ಗಮನಿಸಿದ ಅವರು ಲೇ, ಬಾರಲೇ ಇಲ್ಲಿ, ಎಂದರು ನಾನು ಏನಪ್ಪ ಎನ್ನುತ್ತಾ ಹೋದೆ. ನೀನು ಏನು ತುಳಿದು ಹೋದೆ ಎಂದರು ಏನೂ ಇಲ್ಲ ಹೋಗುವಾಗ ಉಳಿ ಕಾಲಿಗೆ ಬಡಿತು ಎಂದೆ. ಲೇ ಹೊಟ್ಟಿಗೆ ಏನ್ ತಿಂತಿಯಾ, ಹ್ಯಾಂಗಾರ ಪಂಚಳರ ಹೊಟ್ಯಾಗ ಹುಟ್ಟಿದಲೇ ಮೊದಲು ಸ್ವಾಮ್ ಮಾಡು ಎಂದರು ನಾನು ಅದರಂತೆ ಮಾಡಿದೆ. ಇನ್ನು ಮೇಲೆ ಯಾವ ಸಾಮಾನು ಕಾಲಿಂದ ತುಳಿಬಾರದು ಅವು ನಿಮ್ಮವ್ವ ಇದ್ದಂಗಲೇ ತಿಳಿತೇನಾ ? ಎಂದಿದ್ದರು. ಆಗಲೇ ತಿಳಿದಿತ್ತು. ಆ ಉಪಕರಣಗಳ ಮೇಲೆ ಇಟ್ಟಿರುವ ನಂಬಿಕೆ ಗೊತ್ತಾಗಿದ್ದು.

ಹೀಗೆ ಅವರು ಬಳಸುವ ಉಪಕರಣಗಳು ಅವರಿಗೆ ಹೊಟ್ಟೆ ತುಂಬಿಸುವುದು ಅವುಗಳಿಂದ ಈ ಪಂಚಾಳರವರ ಜೀವನ ನಡೆಸುತ್ತಾರೆ. ಇನ್ನು ಕೆಲವು ವಿವರಗಳನ್ನು ನೋಡಬಹುದು.

ಮಹಿಳೆಯರು ಮುಟ್ಟಾದಂತ ಸಂದರ್ಭಗಳಲ್ಲಿ ಅವುಗಳನ್ನು ಮುಟ್ಟುವುದಿಲ್ಲ. ಮೂರು ದಿನಗಳ ನಂತರ ಸ್ನಾನವಾದ ಮೇಲೆ ಅವುಗಳನ್ನು ಮುಟ್ಟಬಹುದು. ಗಂಡ ಯಾವುದಾದರೂ ಸಾಮಾನು ಕೊಡು ಎಂದು ಹೆಂಡತಿಗೆ ಹೇಳಿದರೆ ಅವರು ಕೊಡುವುದಿಲ್ಲ. ಏಕೆ ಅಂತಾ ಕೇಳುವ ಅವಶ್ಯಕತೆಯೇ ಕಂಡು ಬರುವುದಿಲ್ಲ. ಅಷ್ಟೇ ಪಾವಿತ್ರ್ಯ ಸ್ಥಾನವನ್ನು ಈ ಉಪಕರಣಗಳಿಗೆ ಕೊಡುತ್ತಾ ಬಂದಿದ್ದಾರೆ.

**ಉಪಕರಣಗಳು :**

ಕೊಡ್ತಿ.
ಕಡೆ ಉಳಿ.
ಕೀಲುಳಿ.
ಅಗಲಂ ಬುಳಿ.
ಪಟ್ಟ ಉಳಿ.
ಡೊಪ್ಪ ಉಳಿ.
ಮೊನಿಉಳಿ.
ಕೈಬಾಚಿ.
ಹಿರೇ ಬಾಚಿ.
ಬಾಗುಬಾಚಿ.
ಗರಗಸ.
ಸುತ್ತಿಗೆ.
ಮಳಿಕೀಳ ಇಕ್ಕಳ.
ಬೈರಗಿ
ಸುತ್ತುಬೈರಗಿ.
ಕತ್ತು.
ಗೀರುಕಟ್ಟುವ ಕತ್ತು.

ಟೇಪು.
ಮೂಲಿ ಮುಟ್ಟ
ಚಮ್ಮಟಗಿ.
ಆಸು.
ಕೈವಾರ.
ಗಾಲಿ ಕೈವಾರ.
ಕಚ್ಚುಬಡ್ಡಿ.
ಮಸೆಮಣಿ.
ಸಾಣೆಕಲ್ಲು.
ಜಂತ್ರದ ಮಟ್ಟುಣಿ.
ಉಜ್ಜು ಗೊರಡು.
ಕೈ ಉಜ್ಜು ಗೊರಡು.
ಮೂಲಿ ಹರ.
ಪಟ್ಟಿ ಹರ.
ರಿಗ್ಗಿ.
ಕಂಡುಬಡ್ಡಿ.

ಇತ್ಯಾದಿ.,

# ೮. ಉಪಕರಣ ನಿರ್ಮಾಣಕ್ಕೆ ಬಳಸುವ ಮರ ಮುಟ್ಟುಗಳು

ಕಟ್ಟಿಗೆಯಲ್ಲಿ ಉಪಕರಣ ತಯಾರಿಸ ಬೇಕಾದರೆ ತಯಾರಿಸುವಂತಹ ಉಪಕರಣವನ್ನು ಅವಲಂಬಿಸಿರುತ್ತದೆ ಏಕೆಂದರೆ ಒರಟಾಗಿ ಬಳಸುವ ವಸ್ತುಗಳು, ನಯವಾಗಿ ಬಳಸುವ ವಸ್ತುಗಳು ಕಂಡುಬರುತ್ತವೆ ಉಪಕರಣ ಗಳ ನಿರ್ಮಾಣಕ್ಕೆ ಬಳಸುವ ಮರಗಳು ಆಪ್ರದೇಶದಲ್ಲಿ ಸಿಗುವಂತಹ ಮರಗಳಮೇಲೆ ಅವಲಂಬಿಸಿರುತ್ತಾರೆ. ಮಲೆನಾಡು ಕರಾವಳಿ ಅರಣ್ಯ ಪ್ರದೇಶಗಳು ಹೆಚ್ಚಾಗಿದ್ದರೆ ಅಲ್ಲಿ ಬೆಳೆಯುವ ತೇಗ,ಗಂಧ,ಮತ್ತಿ. ಹೊನ್ನಿ, ಇತ್ಯಾದಿ ಜಾತಿಗಳು ಹೆಚ್ಚಾಗಿ ಸಿಗುವುದರಿಂದ ಅಲ್ಲಿ ಬಳಸುವ ಉಪಕರಣಗಳು ಆಜಾತಿಯವುಗಳಾಗಿರುತ್ತವೆ. ಅಲ್ಲಿ ಬೆಲೆಯು ಕಡಿಮೆಯಾಗಿರುತ್ತದೆ. ಆದರೆ ಬಯಲು ಸೀಮೆಯಲ್ಲಿ ತೇಗ, ಗಂಧ, ಮತ್ತಿ. ಹೊನ್ನಿಯಬದಲಿಗೆ ಬೇವಿನಮರ, ಜಾಲಿಮರ, ಹುಣಸಿಮರ, ಚಿರ್ಚಲಮರ,ನೀರಲಗಿರಿ,ಶುಬಾಬುಲ್, ಇತ್ಯಾದಿ ಮರಗಳನ್ನು ಬಳಸುತ್ತಾರೆ ಆಪ್ರದೇಶದಲ್ಲಿ ಮಳೆಯು ಹೆಚ್ಚಾಗಿರುತ್ತದೆ, ಅಂತಹ ಪ್ರದೇಶಗಳಲ್ಲಿ ಅರಣ್ಯ ಹೆಚ್ಚು ಕಂಡುಬರುತ್ತದೆ ಅಲ್ಲಿ ಬಳಸುವ ಪ್ರತಿಯೊಂದು ಉಪಕರಣಗಳು ಕೂಡ ತೇಗ, ಮತ್ತಿ,ಹೊನ್ನೆ ಕಟ್ಟಿಗೆಯನ್ನು ಎಲ್ಲಾ ಉಪಕರಣಗಳನ್ನು ತಯಾರಿಸುತ್ತಾರೆ ಬಯಲು ಸೀಮೆಯಲ್ಲಿ ಮಳೆಯ ಕೊರತೆಯಿದ್ದಾಗ ಮುಖ್ಯವಾದ ಮರಗಳು ಇಲ್ಲಿ ಸಿಗುವುದಿಲ್ಲ. ಸಾಮಾನ್ಯವಾಗಿ ಜಾಲಿ ಬೇವು ಹುಣಸಿಮರಗಳೇ ಸಿಗುವುದರಿಂದ ಈ ಪ್ರದೇಶದಲ್ಲಿ ಇತರ ಉಪಕರಣಗಳನ್ನು ಈ ಜಾತಿಯ ಮರಗಳಿಂದಲೇ ತಯಾರಿಸುತ್ತಾರೆ, ಮುಖ್ಯವಾಗಿ ಹೇಳಬೇಕೆಂದರೆ ಉಪಕರಣಗಳನ್ನು ಬಳಸುವ ಆರ್ಥಿಕ ಪರಿಸ್ಥಿತಿಯ ಮೇಲೆ ನಿಂತಿರುತ್ತದೆ. ಬಯಲು ಸಿಮೆಯ ಜನರು ಆರ್ಥಿಕವಾಗಿ ಮುಂದಿದ್ದರೆ ಮನೆಯ ಉಪಕರಣಗಳಿಗೆ ತೇಗ, ಹೊನ್ನೆ ,ಮಾಡಿಸುತ್ತಾರೆ ಆ ಮರಗಳು ಎಲ್ಲಿ ಸಿಗುತ್ತವೆ ಅಲ್ಲಿಂದ ತಂದು ಮಾಡಿಸುತ್ತಾರೆ ಅಥವಾ ಇನ್ನಾರಾದರು ಸಾಮಾನ್ಯವಾಗಿ ಕೊರೆಯುವ ಯಂತ್ರ ಇದ್ದಲ್ಲಿ (ಸಾ ಮಿಲ್) ಕಟ್ಟಿಗೆ ವ್ಯಾಪಾರಿಗಳು ತಂದಿಟ್ಟುಕೊಂಡಿರುತ್ತಾರೆ. ಅವರ ಹತ್ತಿರಹೋಗಿ ಮರಗಳನ್ನು ಕೊಂಡುಕೊಳ್ಳುತ್ತಾರೆ. ಆದರೆ

ಬೆಲೆಹೆಚ್ಚಾಗಿರುತ್ತದೆ. ಆಕಾರಣಕ್ಕಾಗಿ ಬಡವರಿಗೆ ಕಡ್ಡಿ, ವಾಡಂಬಿ, ದ್ರಾಕ್ಷಿ ಇದ್ದಂತೆ ಬೇವು ಜಾಲಿ ಮರವೇ ಗತಿಯಾಗಿರುತ್ತದೆ. ತೇಗದಮರ, ಎಲ್ಲಾ ಮರಗಳಿಗಿಂತ ತಾಳಿಕೆ ಹೆಚ್ಚು ಕುಸುರಿಕೆಲಸವನ್ನು ಮಾಡಬಹುದು ಜೊತೆಗೆ ನಯವಾಗಿರುತ್ತದೆ. ಇದರ ಬೆಲೆ ಒಂದು ಘನ ಅಡಿಗೆ೧೪೦೦-೧೫೦೦ ರೂ ಇರುತ್ತದೆ. ಶ್ರೀಗಂಧದ ಬೆಲೆಕಟ್ಟಲು ಸಾಧ್ಯವಿಲ್ಲ ಏಕೆಂದರೆ ಅದನ್ನು ಸರ್ಕಾರ ಉಸ್ತವಾರಿಕೆಯಲ್ಲಿಯೇ ಇರುತದೆ. ಮತ್ತಿ ಹೊನ್ನಿ ಘನ ಅಡಿಗೆ ರೂ ೭೦೦-೮೦೦ ರೂ ವರೆಗೆ ಬೆಲೆ ಇರುತ್ತದೆ. ಇವೆಲ್ಲವನ್ನು ಕೊಂಡುಕೊಳ್ಳಲು ಅಸಮರ್ಥರಾದವರು ಬೇವಿನ ಮರಗಳನ್ನು ಕೊಂಡುಕೊಳ್ಳತ್ತಾರೆ ಒಂದು ಘನಅಡಿಗೆ ೩೦೦-೩೫೦ ರಿಂದ ಎಳೆಕಟ್ಟಿಗೆ ಯಾಗಿದ್ದರೆ ೪೦೦ ರೂ ಆಗಿರುತ್ತದೆ ಜಾಲಿ ಮರ ಬಯಲು ಸೀಮೆಯಲ್ಲಿ ಬಹಳ ಕಡಿಮೆಯಲ್ಲಿ ಸಿಗುತ್ತವೆ. ಏಕೆಂದರೆ ಎಲ್ಲಿ ನೊಡಿದಲ್ಲಿ ಜಾಲಿಮರವೇ ಕಾಣಿಸುತ್ತವೆ. ಗಟ್ಟಿಯಾದ ಮರವಾಗಿರುತ್ತದೆ ಒಂದು ಘನಅಡಿಗೆ ೧೫೦-೨೦೦ ರೂ ಆಗಿರುತ್ತದೆ. ವ್ಯವಸಾಯದಲ್ಲಿ ಎಲ್ಲಾ ಉಪಕರಣಗಳನ್ನು ಈ ಜಾಲಿ ಮರದಿಂದಲೇ ಮಾಡುತ್ತಾರೆ. ಇದು ಗಟ್ಟಿ ಮುಟ್ಟಾದ ಮರವಾಗಿದೆ. ಹುಳ ತಿನ್ನುವಂತದ್ದಲ್ಲ.

ಈ ಎಲ್ಲಾ ಮರಗಳನ್ನು ಬಡಗಿಯರು ನೋಡಿದ ತಕ್ಷಣ ಇದು ಇಂತಹದೇ ಎಂದು ಹೇಳುತ್ತಾರೆ ಆದರೆ ಬೇರೆಯವರಿಗೆ ಯಾಕೆ ಗೊತ್ತಾಗುವುದಿಲ್ಲ ಎಂದರೆ ಮರದ ಗುಣಗಳು ಬಳಸುವಂತವರು ಬಡಗಿಯರು ಕಟ್ಟಿಗೆ ನೋಡುತ್ತಿದ್ದಂತೆ ಇದು ಎಳೆಮರ ಇಷ್ಟೆವರ್ಷದ ಮರ ಎಂದು ಹೇಳುವ ಚಾಣಕ್ಷ ಬುದ್ದಿಯಿರುತ್ತದೆ. ಹೇಗೆಂದರೆ ಮರದ ಗೆರೆಗಳಿಂದ ಆ ಎಳೆಯ ಆದಾರದ ಮೇಲೆ ವರ್ಷಗಳನ್ನು ಹೇಳುತ್ತಾರೆ. ಬಡಗಿ ಕಟ್ಟಿಗೆ ನೊಡಿದ ತಕ್ಷಣ ಹೇಳವುದಕ್ಕೆ ಮರದಗುಣ ಗೊತ್ತಿರುತ್ತದೆ. ಆ ಗುಣಗಳ ಮೇಲೆ ಇಂತಹವು ಎಂದು ಹೇಳುತ್ತಾರೆ. ಒಂದು ತೇಗದ ಮರವನ್ನು ಬಡಗಿ ನೊಡಿದ ತಕ್ಷಣ ಎಳೆಯ ಬಣ್ಣ ಮತ್ತು ವಾಸನೆಯ ಮೂಲಕ ನಿಖರವಾಗಿ ಹೇಳುತ್ತಾರೆ. ಬೇರೆಯವರು ಕೊಂಡುಕೊಳ್ಳುವಾಗ ಬಡಗಿಯರನ್ನು ಕರೆದು ಕೊಂಡು ಹೊಗುತ್ತಾರೆ. ಕಾರಣ ಅವರಿಗೆ ಮೋಸ ವಾಗಬಾರದೆಂಬ ದೃಷ್ಟಿಯಿಂದ ಮರವನ್ನು ಕೊಡುವರು ಬಡಗಿ ಬಾರದಿದ್ದರೆ ಮೋಸಹೊಗುವುದುಂಟು ತೇಗವನ್ನು ತೀರು. ಬಾಗಿಲು ,ಕಿಟಕಿ, ಕದ ಮತ್ತು ಕುಸುರಿ ಕೆಲಸಕ್ಕೆ ಬಳಸುತ್ತಾರೆ.

ಒಂದು ಸಾರಿ ನಮ್ಮ ಮಾವನ ಜೊತೆ ಸವಣೂರಿಗೆ ಕಟ್ಟಿಗೆ ತರಲು ಹೊಗಿದ್ದೆ ಅಲ್ಲಿ ನಮ್ಮ ಮಾವನವರು ದೇವರ ಮಂಟಪ ಮಾಡಲು ಹೊನ್ನಿ ಕಟ್ಟಿಗೆಯಲ್ಲಿ ಅಳತೆಯನ್ನು ಕೊಟ್ಟರು ಮಾರಾಟಗಾರರು ಹೊನ್ನಿಯ ಕಟ್ಟಗೆ ತರಹ ಇರುವ ಇನ್ನೊಂದು ಜಾತಿಯ ಮರವನ್ನು ಕೊರೆದು ಕೊಟ್ಟರು ಇವರಿಗೆ ಅನುಮಾನ ಬಂತು ಉತ್ತರ ಕರ್ನಾಟಕದ ಜನರು ಎಲೆ ಅಡಿಕೆ ಹಾಕುವುದು ಹೆಚ್ಚು ಅವರು ಜೇಬಿನಿಂದ ಸುಣ್ಣದ ಡಬ್ಬಿಯನ್ನು ಹೊರಗೆ ತೆಗೆದು ಕಟ್ಟಿಗೆ ಗೆ ಹಚ್ಚಿ ಸ್ವಲ್ಪ ನೀರು ತಂದುಕೊಡು ಬಾ ವಾಸು ಎಂದರು ನಾನು ಜೊಗಸೆಯಿಂದ ನೀರನ್ನು ಆ ಸುಣ್ಣದ ಮೇಲೆ ಹಾಕಿದೆ ಆಗ ಅದರ ಯಾವ ಬಣ್ಣಕ್ಕೂ ಬರಲಿಲ್ಲ ತಕ್ಷಣವೇ ಇದು ಹೊನ್ನಿ ಕಟ್ಟಿಗೆ ಯಲ್ಲ ಈಗ ನೀವು ಮೋಸ ಮಾಡಿದರೆ ನಾನು ಮತ್ತೊಮ್ಮೆ ಬರುವುದಿಲ್ಲ ಎಂದು ಆಕಟ್ಟಿಗೆ ಅಲ್ಲ ಅಂತ ಹೇಗೆ ಹೇಳುತ್ತೀಯ ಅಂದರು ಅವರು.ಸುಣ್ಣದ ನೀರನ್ನು ಹೊನ್ನಿಯ ಕಟ್ಟಿಗೆಯ ಮೇಲೆಹಾಕುವುದರಿಂದ ಸುಣ್ಣ ಹಳದಿ ಬಣ್ಣಕ್ಕೆ ತಿರುಗಿದರೆ ಮಾತ್ರ ಹೊನ್ನಿ ಮರ ಅಂತ ಗೊತ್ತಾಗುತ್ತದೆ ನಾವು ಬಡಿಗೇರು ನಮಗೆ ಪಾಠ ಕಲಿಸುತ್ತೀರಾ ಎಂದು ಬೇರೆ ಮರದಿಂದ ಕೊರೆಸಿಕೊಂಡು ಬಂದಿದ್ದೇವು. ಹೀಗೆ ಒಂದೊಂದು ಮರವನ್ನು ಒಂದೊಂದು ಗುಣದಿಂದ ಕಂಡು ಹಿಡಿಯುತ್ತಾರೆ ಈ ಬಡಿಗಿಯರು.

೮.೧. ಮರಕಂಡು ಹಿಡಿಯುವ ಪದ್ಧತಿ :-

ಬೇವಿನ ಮರ------------------ ವಾಸನೆಯಿಂದ.
ತೇಗದ ಮರ------------------ಕಟ್ಟಿಗೆ ಎಳೆ ಮತ್ತು ವಾಸನೆಯಿಂದ.
ಗಂಧದಮರ------------------ವಾಸನೆ.
ಹೊನ್ನಿ ಮರ------------------ಬಣ್ಣ.
ಜಾಲಿ ಮರ-------------------ಬಣ್ಣ ಮತ್ತು ಪೆಡಸು.
ಹುಣಸೆ ಮರ------------------ಬಣ್ಣ ಮತ್ತು ಕೆಚ್ಚು.
ನೀರಲಗಿರಿ-------------------ಬಣ್ಣ.
ಮತ್ತಿ-----------------------ಬಣ್ಣ.
ಸುಬಾಬುಲ್ಲು------------------ಬಣ್ಣ ಮತ್ತು ಎಳೆ.
ಚಿರ್ಚಲ----------------------ಕೆಚ್ಚು.
ಮಳಗಿಮರ--------------------ಬಣ್ಣ.
ಬನ್ನಿ ಮರ---------------------ಕಟ್ಟಿಗೆಯಿಂದ.
ಮಾವಿನ ಮರ------------------ವಾಸನೆ.

ಹೀಗೆ ಎಲ್ಲಾ ಮರಗಳನ್ನು ಇಂತದ್ದೆ ಮರ ಎಂದು ಹೇಳುವುದು ಬಹು ಸುಲುಭ ಏಕೆಂದರೆ ಒಂದೊಂದು ಮರಕ್ಕೂ ಒಂದೊಂದು ಗುಣ ಇರುತ್ತದೆ. ಅವುಗಳ ಗುಣ ಸ್ವಬಾವ ಬಡಗಿಯರಿಗೆ ಗೊತ್ತಿರುತ್ತದೆ. ಏಕೆಂದರೆ ಅವರ ವೃತ್ತಿಯೇ ಕಟ್ಟಿಗೆ ಜೊತೆ ಆದುದರಿಂದ ಮರದ ಜಾತಿಯನ್ನು ಬಹು ಸುಲಬವಾಗಿ ಕಂಡು ಹಿಡಿಯುತ್ತಾರೆ.

**ಯಾವ್ಯಾವ ಮರಗಳನ್ನು ಬಳಸುವರು ? ಯಾರಿಗೆ ? ಯಾವ ವಿಶೇಷ ?**

ಉಪಕರಣ ನಿರ್ಮಾಣಕ್ಕೆ ಕೆಲವೊಂದು ಮರಗಳನ್ನು ಒಂದೊಂದು ಉಪಕರಣಕ್ಕೆ ಬಳಸುತ್ತಾರೆ. ಭೂಮಿಯಮೇಲೆ ಬೆಳೆದ ಬಹುತೇಕ ಮರಗಳು ಉಪಯೊಗಕ್ಕೆ ಬರುತ್ತವೆ ಮರಗಳಲ್ಲಿ ನಾನಾ ಜಾತಿಯ ಮರಗಳನ್ನು ನಾವು ಕಾಣಬಹುದು ಒಂದೊಂದು ಮರಗಳು ಅದರದೇ ಆದ ಸ್ವಬಾವವನ್ನು ಹೊಂದಿರುತ್ತದೆ. ಹೀಗೆ ಒಂದೊಂದು ಜಾತಿಯ ಮರಗಳು ಒಂದೊಂದು ಉಪಕರಣಕ್ಕೆ ಉಪಯೋಗಕ್ಕೆ ಬರುತ್ತವೆ.

**ಮರಗಳ ಹೆಸರು :**

೧) ತೇಗದ ಮರ. ೧೪) ಬ್ಯಾಲುಣಿಸಿ ಮರ.
೨) ಹೊನ್ನಿ ಮರ. ೧೫) ಪತ್ರಿ ಮರ.
೩.) ಮತ್ತಿ ಮರ. ೧೬) ತೆಂಗಿನ ಮರ.
೪) ಬೇವಿನಮರ. ೧೭) ಅಡಿಕೆ ಮರ.
೫) ನೀರಲಗಿರಿ ಮರ. ೧೮) ಬಿದರು.

೬) ಜಾಲಿ ಮರ.
೭) ಮಳಿಗಿ ಮರ.
೮) ಹುಣಸಿ ಮರ.
೯) ಬನ್ನಿ ಮರ
೧೦) ಚಿರ್ಜಲ ಮರ.
೧೧) ಸುಬಾಬುಲ್ಲ ಮರ.
೧೨) ಅರಬೇವಿನ ಮರ.
೧೩) ಹತ್ತಿ ಮರ.
೧೯) ತಾಳಿಮರ.
೨೦) ಮಾವಿನ ಮರ.

ಇನ್ನು ನೂರಾರು ಜಾತಿಯ ಮರಗಳನ್ನು ಉಪಕರಣ ನಿರ್ಮಾಣಕ್ಕೆ ಬಳಸುವುದುಂಟು.

ಸಾಮಾನ್ಯ ವಾಗಿ ತೇಗದ ಮರ , ಹೊನ್ನೆಮರ, ಮತ್ತಿ, ಬೇವಿನಮರ, ಮಾವಿನ ಮರ . ಇವೆಲ್ಲವುಗಳನ್ನು ಉಪಕರಣ ತಯಾರಿಸುವುದರಿಂದ ತಾಳಿಕೆಯು ಬರುವುದರಿಂದ ಈ ಮರಗಳನ್ನು ಬಳಸುತ್ತಾರೆ. ಕಬ್ಬಿಣ ಉಪಕರಣಗಳಿದ್ದಾಗ್ಯೂ ಮರದ ಉಪಕರಣಗಳು ಕಡಿಮೆ ಬೆಲೆಯಲ್ಲಿ ಸಿಗುತ್ತಾವೆ. ಇನ್ನೊಂದು ಮನೆ ಮತ್ತು ವ್ಯವಸಾಯ ಉಪಕರಣಗಳು ಸಾಮಾನ್ಯವಾಗಿ ಕಟ್ಟಿಗೆಯಿಂದಲೇ ಮಾಡುತ್ತಾರೆ. ಕೆಲವೊಂದು ನಂಬಿಕೆ ಗಳಿಂದ ಎಷ್ಟೊ ಶ್ರೀಮಂತರಾದರು ಮರದ ಉಪಕರಣವನ್ನು ಬಳಸುತ್ತಾರೆ. ಇದರಲ್ಲಿ ವಿಶೇಷತೆ ಯೆಂದರೆ ಅವು ಕುಸುರಿ ಕೆಲಸಕ್ಕೆ ಅನುಕೂಲ ವಾಗುವುದರಿಂದ ಕಟ್ಟಿಗೆಯಿಂದ ಯಾವ ದೇವರ ಚಿತ್ರ ,ರೇಖಾ ಚಿತ್ರ, ಹೂಗಳ ಚಿತ್ರ ವನ್ನು -ತಮಗೆ ಬೇಕಾದ ರೀತಿಯಲ್ಲಿ ಮರದಿಂದ ಚಿತ್ರಿಸಬಹುದಾದ ಮತ್ತು ಯಾವ ಆಕಾರದಿಂದಲೂ ತಯಾರಿಸಬಹುದಾಗಿ ಕಟ್ಟಿಗೆಯಿಂದ ಮನೆಯ ಮಡಗಿ ಮಾಡುವ ಪ್ರಮುಖ ಪಾತ್ರವಹಿಸುತ್ತವೆ. ಕಟ್ಟಿಗೆ ಇದ್ದರೆ ಮನೆ ಇಲ್ಲದಿದ್ದರೆ ಮನೆ ಅಲ್ಲ ಅದು ಬಾಳಿಕೆಗೆ ಬರುವುದಿಲ್ಲ. ಒಂದು ಮಡಗಿ ಮಾಡಿದ ಮನೆಗೂ ಮತ್ತು ಸಿಮೆಂಟಿನಿಂದ ತಯಾರಾದ ಮನೆಗಳಿಗೂ ವ್ಯತ್ಯಾಸ ಇದೆ. ಸಿಮೆಂಟಿಗೆ ೨೫-೩೦ ವರ್ಷ ಆಯುಷ್ಯ ಇದ್ದರೆ೧೦೦-೧೫೦-೨೦೦ ವರ್ಷಗಳ ಕಾಲ ತಾಳಿಕೆ ಬಂದಿರುವುದನ್ನು ಇಂದಿಗೂ ಕಾಣಬಹುದು. ಮಡಗಿ ಯಿಂದ ಮಾಡಿದ ಮನೆ ಯಾವಕಾಲಕ್ಕೂ ಒಂದೇ ಹವಾಗುಣವನ್ನು ಹೊಂದಿರುತ್ತದೆ ಇನ್ನೂ ಹಲವಾರು ವಿಶೇಷ ಗಳಿಂದ ಕೂಡಿದ ಮರದ ಉಪಕರಣಗಳು ಉತ್ತಮ ವಾಗಿರುತ್ತವೆ. ಸೋಗಿ ವೀರಭಧ್ರೇಶ್ವರ ರಥವನ್ನು ೧೮೯೯ರಲ್ಲಿ ತೇಗದ ಕಟ್ಟಿಗೆಯಿಂದ ರಚಿಸಿದ್ದು ೧೮೫ ವರ್ಷಗಳಾದರು ತನ್ನ ಗುಣವನ್ನು ಇನ್ನೂ ೨೦೦ವರ್ಷಗಳ ವರೆಗೆ ಬಾಳಿಕೆ ಬರಬಹುದೆಂದರೆ ಅದೇನು ಸಣ್ಣ ವಿಷವೇ ಅದು ಇಂದು ನೊಡಿದರೆ ೫-೬ ವರ್ಷಗಳಾಗಿರಬಹುದೆಂದು ಉಹಿಸುತ್ತಾರೆ . ಆಗಿನ ಕೆಲಸ ಮತ್ತು ಕಟ್ಟಿಗೆಕೂಡ ಇಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಕಬ್ಬಿಣಕಿಂತ ಕಟ್ಟಿಗೆ ಹಗುರ ವಾಗಿರುತ್ತದೆ ಎಂಬುವುದು ಕೂಡ ವಿಶೇಷ. ಈ ರೀತಿಯಾಗಿ ಮರವನ್ನು ಬಳಸುವ ವಿಶೇಷತೆಯನ್ನು ಹೇಳಬಹುದು.

### ೮.೨. ಬಳಸುವ ಮರಗಳು.

ಮರದಿಂದ ಉಪಕರಣ ತಯಾರಿಸುವ ಮುಟ್ಟುಗಳ ಮೇಲೆ ಅವಲಂಬಿತವಾಗಿರುತ್ತದೆ ಕೆಲವೊಂದು ಉಪಕರಣಗಳು ಒರಟಾಗಿ ಮತ್ತೆ ಕೆಲವೊಂದು ನಯವಾಗಿ ಉಪಯೋಗಿಸುವುದರ ಮೂಲಕ ಉಪಕರಣಗಳನ್ನು ಯಾವ ಮರದಲ್ಲಿ ತಯಾರಿಸಿದರೆ. ಚನ್ನ ಯಾವ ಮರದಲ್ಲಿ ತಯಾರಿಸಿದ್ದಾರೆ ಸರಿಯಲ್ಲ

ಎಂಬುವನ್ನು ಈ ಬಡಗಿಯವಿಗೆ ಗೊತ್ತಾಗುತ್ತದೆ.

ಮರದಿಂದ ತಯಾರಿಸುವ ವ್ಯಕ್ತಿಗಿಂತ ತಯಾರು ಮಾಡಿಸುವವನ ಸಾಮರ್ಥ್ಯದಮೇಲೆ ನಿಂತಿರುತ್ತದೆ. ಬಡವರು ಬಳಸುವ ಮರಗಳೇ ಬೇರೆ. ಆರ್ಥಿಕ ವಾಗಿ ಉತ್ತಮರು ಬಳಸುವ ಮರಗಳೇ ಬೇರೆ ಕೆಲವೊಂದು ಎಷ್ಟೊ ಆರ್ಥಿಕವಾಗಿದ್ದರೂ ಯಾವ ಉಪಕರಣವನ್ನು ಯಾವ ಮರದಿಂದ ಮಾಡಬೇಕು ಅದೇಮರದಿಂದ ತಯಾರಿಸಬೇಕಾಗುತ್ತದೆ. ಅಂತಹ ಉಪಕರಣಗಳು ಇವೆ.

**ಯಾವ ಮರದಿಂದ ಯಾವ ಉಪಕರಣ :**

**ತೇಗದ ಮರ ದಿಂದ :** ಕದ, ಬಾಗಿಲು, ಕಿಟಗಿ, ತೊಲಿ, ಕಂಬ, ಬೋದು, ತೀರು, ಪಲ್ಲಕ್ಕಿ, ಏರಿಕೊಲು, ಮಂದಾಸನ, ಟೇಬಲ್, ಕುರ್ಚಿ, ದೇವರ ವಿಗ್ರಹಗಳು ,ಮಂಚ, ಇತ್ಯಾದಿ ಸೌಂದರ್ಯವಾದ ಉಪಕರಣಗಳನ್ನು ಈ ಮರದಲ್ಲಿ ತಯಾರಿಸಬಹುದು.

**ಹೊನ್ನಿ ಮರ , ಮತ್ತಿ ಮರ ,ಬೇವಿನ ಮರ :-** ತೊಲಿ ,ತೊಲಿ ಗಂಬ, ಬೊದ, ಕದ, ಬಾಗಿಲು, ಕಿಟಕಿ ಕಾಟು, ತೀರು, ಗೃಹೋಪಕರಣಗಳ ಜೊತೆಗೆ ಮಂದಾಸನ ಪಲ್ಲಕ್ಕಿ ಮಂಟಪಗಳು ಇತ್ಯಾದಿ.

**ನೀಲಗಿರಿ ಮರ :** ಬಂಡಿಯ ಏರಿಕೊಲು , ರೀಪುಗಳು, ತೀರು ,ಕುಂಟೆ ಇಚುಗಳು.

**ಜಾಲಿ ಮರ :** ಕೂರಿಗೆ, ಕುಂಟೆ, ನೇಗಿಲು, ಎಡೆಕುಂಟೆ, ಬ್ಯಾಕೊಲು, ಕಣಗ, ಬಂಡಿ ಉಪಕರಣಗಳಾದ ಹಲ್ಲು, ವಂಕಿ, ಆಡಿಗಿ, ಓಟಿ, ಗುದ್ಲಿ, ಸೆಲಕಿ, ಕೊಡ್ಲಿ, ಕಾವುಗಳು, ಮೊಕಮರ, ಆಣೆಮಣಿ, ಆಡಿಗೆ ಹಲ್ಲು, - ವ್ಯವಸಾಯ ಉಪಕರಣಗಳು.

**ಹುಣಿಸೆಮರ :** ಬಂಡಿ ಹಲಿಗೆ, ಲಾರಿ ಹಲಿಗೆ, ಕೊಡ್ತಿ, ಉಳಿಹಿಡಿ ಮುಖ್ಯವಾಗಿ ಕೂರಿಗೆಬಟ್ಟಲು.

**ಸುಬಾಬುಲ್ಲು :** ಕದಗಳು, ಕಿಟಿಕಿ ಬಾಗಿಲು, ಏರಿಕೋಲು, ಟೇಬಲ್, ಕಾಟ್, ರೀಪುಗಳು.

**ಚಿರ್ಚಲ ಮರ :** ಬಂಡಿಗಾಲಿಯ ಕುಂಭ, ಬಂಡಿ ಹಲಿಗೆ.

**ಅರಬೇವಿನ ಮರ :** ಏರಿಕೊಲು ,ನೊಗ, ಈಚುಗಳು.

**ಬ್ಯಾಲುಣಿಸಿ ಮರ , ಹತ್ತಿ ಮರ :** ಟೇಬಲ್ ,ಕುರ್ಚಿ, ಮಂಚ, - ಒಟ್ಟಾರೆ ಪರ್ನಿಚರ್.

**ತೆಂಗಿನ ಮರ,ತಾಳಿಮರ, ಅಡಿಕೆ ಮರ. :** ಅಡ್ಡಲಾಗಿ ಹಾಕುವ ತೀರುಗಳು ಮಾತ್ರ ಹಂಚು ಹಾಕವ ರೀಪುಗಳು.

**ಮಾವಿನ ಮರ :** ಬಂಡಿ ಹಲಗೆ, ಟೇಬಲ್, ಕದಗಳು.

**ಬಿದರು :** ಅಡ್ಡಲಾಗಿ ಹಂಚು ಹಾಕುವ ತೀರುಗಳು, ಸೆಡ್ಡಿಗಳು , ಗೊಟ್ಟ, ಏಣಿತೋಳು.

ಹೀಗೆ ಮರದ ಗುಣದ ಮೇಲೆ ಉಪಕರಣಗಳನ್ನು ತಯಾರಿಸುತ್ತಾರೆ. ಈ ಮರಗಳನ್ನು ಯಾಕೆ ಬಳಸುತ್ತಾರೆಂದರೆ ಕೆಲವೊಂದು ಮರಗಳು ಕೆಲವೊಂದು ಉಪಕರಣಗಳನ್ನು ಮಾಡಲು ಬರುವುದಿಲ್ಲ. ಕೆಲಸಕ್ಕೆ ತಕ್ಕಂತೆ ಮತ್ತು ವಸ್ತುಗಳ ಬಳಕೆಯ ತಕ್ಕಂತೆ ಉಪಕರಣಗಳನ್ನು ತಯಾರಿಸುತ್ತಾರೆ. ತೇಗ ,ಹೊನ್ನಿ, ಮತ್ತಿ ,ಕಟಿಗೆಯಿಂದ ವ್ಯವಸಾಯ ಉಪಕರಣಗಳನ್ನು ತಯಾರಿಸಲು ಬರುವುದಿಲ್ಲ. ಏಕೆಂದರೆ ತಾಳಿಕೆ ಅಂದರೆ ಭೂಮಿಯ ಮೇಲೆ ಎಳೆದು ಕೊಂಡು ಹೊಗುವುದರಿಂದ ಜಾಲಿ ಮರ ಗಟ್ಟಿಯಾದರಿಂದ ಇತರ ಮರಗಳಿಂದ ವ್ಯವಸಾಯ ಉಪಕರಣಗಳನ್ನು ಮಾಡೊದಿಲ್ಲ. ತೇಗದ ಮರದಿಂದ ಬಂಡಿ ಅಥವಾ ವ್ಯವಸಾಯದ

ಉಪಕರಣಗಳನ್ನು ತಯಾರಿಸಿದರೆ ಅವು ತಾಳಿಕೆ ಬರುವುದಿಲ್ಲ ಬಹುಬೇಗನೆ ಸವೆಯುವ ಸಾಧ್ಯತೆ ಇರುತ್ತದೆ. ಆ ಕಾರಣಕ್ಕಾಗಿ ಯಾವ ಮರದಿಂದ ಯಾವ ಉಪಕರಣ ಬೇಕೊ ಅದರಿಂದಲೇ ತಯಾರಿಸಬೇಕು. ಅರಬೇವಿನ ಮರವು ಬೆಂಡು ಇದ್ದಂತೆ. ಆ ಕಾರಣಕ್ಕಾಗಿ ಹೆಚ್ಚು ಬಳಕೆಯಾಗದ ಸಂದರ್ಭಗಳಲ್ಲಿ ಉಪಯೋಗಿಸುತ್ತಾರೆ. ಇದು ಹಗುರವಾಗಿರುತ್ತದೆ. ನೊಗ, ಏರಿಕೋಲು ಮಾಡಿದರೂ ನಡೆಯುತ್ತದೆ.

ಹುಣಸೆ ಮರದಿಂದ ಕೂರಿಗೆ ಬಟ್ಟಲು, ಬಂಡಿ ಹಲಗೆಗಳನ್ನು, ಬಳಸುತ್ತಾರೆ. ಬಡಗಿಯರು ಬಳಸುವ ಕೊಡತಿ , ಉಳಿ ಹಿಡಿಗಳನ್ನು ಇದರಿಂದ ತಯಾರುಸುತ್ತಾರೆ, ಏಕೆಂದರೆ ಇದು ಕಬ್ಬಿಣದಂತಹ ಶಕ್ತಿ ಹೊಂದಿರುತ್ತದೆ. ಕೆಲಸ ಮಾಡಲು ಬಹು ಕಷ್ಟದ ಕೆಲಸ ವಾದ್ದರಿಂದ ಇದರ ಬಳಕೆ ಕಡಿಮೆ. ತೆಂಗಿನಮರ ತಾಳಿ ಮರ, ಅಡಿಕೆ ಮರಗಳು ಈ ಹುಣಿಸೆ ಮರದ ಸ್ವಬಾವ ಹೊಂದಿದ್ದರೂ ಟೊಳ್ಳಗಿದ್ದರೂ ಬಹು ಗಟ್ಟಿ ಮುಟ್ಟು ಅದಕ್ಕೆ ಮನೆಯ ಹಂಚು ಹಾಕುವಾಗ ಅಡ್ಡವಾಗಿ ಹಾಕಲಿಕ್ಕೆ ತೀರುಗಳಾಗಿ ಬಳಸುತ್ತಾರೆ.

ಬಿದಿರು ಹೆಚ್ಚು ವ್ಯವಸಾಯ ಉಪಕರಣಕ್ಕೆ ಬರುವುದಿಲ್ಲವಾದರು ಬಿತ್ತುವುದಕ್ಕೆ ಸೆಡ್ಡಿಗಳು ಗೊಟ್ಟಗಳು ಏಣಿ ತೊಳುಗಳು ಬಾರಿಕೊಲು ಗುಣಿ , ಇತ್ಯಾದಿ ವಸ್ತುಗಳನ್ನು ತಯಾರಿಸುತ್ತಾರೆ . ಏಕೆಂದರೆ ಇದು ಪೂರ್ತಾ ಟೊಳ್ಳಾಗಿರುತ್ತದೆ, ಆಕಡೆಯಿಂದ ಈ ಕಡೆವರೆಗೂ ತೂತು ಇರುತ್ತದೆ. ಅದಕ್ಕೆ ಈ ಉಪಕರಣಕ್ಕೆ ಬಳಸುತ್ತಾರೆ . ಈ ಎಲ್ಲಾ ಉಪಕರಣಗಳ ಬಳಕೆಯ ಮೇಲೆ ಮರಗಳು ಅವಲಂಬಿತವಾಗರುತ್ತದೆ.

**೮.೩ ಬಳಸಲಾಗದ ಮರಗಳು :**

ಕೆಲವು ಮರಗಳು ಗಟ್ಟಿಯಾದ ಗುಣವನ್ನು ಹೊಂದಿರುತ್ತವೆ. ಕೆಲವು ಮರಗಳು ಹಗುರವಾಗಿ (ಬೆಂಡು) ತಾಳಿಕೆಯ ಗುಣಗಳನ್ನು ಹೊಂದಿರುವುದಿಲ್ಲ. ಅಂತಹ ಮರಗಳಿಂದ ಉಪಕರಣಗಳು ತಯಸರಿಸಲು ಸಾಧ್ಯವಾಗದಂತಹ ಅಥವಾ ಕೆಲವು ನಂಬಿಕೆಗಳಿಂದ ಬೆಳೆಸಲಾಗದ ಮರಗಳು ಇವೆ. ಅವುಗಳು ಈ ಕೆಳಗಿನಂತಿವೆ.

೧) ನುಗ್ಗಿ ಮರ.
೨)ಬನ್ನಿ ಮರ.
೩) ಪತ್ರಿಮರ.
೪) ಆಲವಾಣದ ಮರ.
೫) ಗೊಬ್ಬರದ ಗಿಡ.
೬) ಆಲದ ಮರ.
೭) ಚಿರ್ಜಲ ಮರ.- ಇತ್ಯಾದಿ ಮರಗಳು

**ಯಾಕೆ ?**

ಸಾಮಾನ್ಯ ವಾಗಿ ಈ ಮರಗಳಿಂದ ಉಪಕರಣಗಳನ್ನು ತಯಾರಿಸುವುದಿಲ್ಲ ಇವುಗಳನ್ನು ಒಂದಿಲ್ಲೊಂದು ಗುಣಗಳನ್ನು ಹೊಂದಿರುವುದರಿಂದ ಅಂದರೆ ನುಗ್ಗಿ ಮರವು ಯಾವ ಉಪಕರಣಕ್ಕೂ ಬರುವುದಿಲ್ಲ ಅದು ಗಟ್ಟಿ ಯಾದ ಮರವಲ್ಲ. ಅದಕ್ಕೆ ಕೆಲವೊಂದು ಸಂದರ್ಭದಲ್ಲಿ "ನುಗ್ಗಿ ಗಿಡಕ್ಕೆ ನೇಣುಹಾಕ್ಯೆ" ಎಂದು ಹೇಳುತಿದ್ದಾರೆ. ಏಕೆಂದರೆ ಅದರ ಗುಣ ಎಲ್ಲರಿಗೂ ಗೊತ್ತಿದ್ದೇ ಆದ್ದರಿಂದ ಅವನು ಸಾಯುವುದಿಲ್ಲ ಎಂಬುದು ಗೊತ್ತಿದೆ. ಈ ಮಾತನ್ನು ಹೇಳುತ್ತಿರುತ್ತಾರೆಂದರೆ ಮತ್ತೇನು ಹೇಳುವ ಅಗತ್ಯವಿಲ್ಲ. ಹಾಗೆ ಕೂಡಾ ಆಲವಾಣದ ಮರಗಳನ್ನು ಗೊಬ್ಬರದ ಗಿಡ ಕೂಡ ಇನ್ನು ಬನ್ನಿ ಮರ ಆಲದ ಮರ ಪತ್ರಿ ಮರ ದೇವರ ಸಮಾನ ಎಂಬ ನಂಬಿಕೆ ಯಿಂದ ಯಾರು ಉಪಯೋಗಿಸುವುದಿಲ್ಲ. ಬನ್ನಿ ಮರ ಮಹಾಕಾಳಿ ಯೆಂಬ ಬಾವನೆ ಗಳಂತೆ ಈ ಎರಡು ಮರಗಳು ಇತರ ದೇವರ ನಾಮಗಳಿಂದ ಕರೆಸಿಕೊಳ್ಳುವುದರಿಂದ ಈ ಮರಗಳನ್ನು ಬೆಳೆಸುವುದಿಲ್ಲ.

ಇಲ್ಲಿ ಮುಖ್ಯವಾಗಿ ಚರ್ಚಿ ಸಬೇಕಾದ ಮರವೆಂದರೆ ಚರ್ಚಿಲ ಮರ ಇದನ್ನು ಬಂಡಿಯ ಕುಂಭವನ್ನು ಬಿಟ್ಟರೆ ಬೇರೆನು ಉಪಕರಣ ಮಾಡುವುದಿಲ್ಲ. ಮನೆ ಬಳಕೆ ವಸ್ತುಗಳನ್ನು ಮಾಡಿದರೆ ಸರಿಯಾಗಿ ಜೀವನ ಮಾಡುವುದಿಲ್ಲ. ಆ ಮನೆ ಉದ್ದಾರ ವಾಗುವುದಿಲ್ಲ ಎಂಬ ನಂಬಿಕೆ ಇದೆ. ಈ ಕಟ್ಟಿಗೆಯಿಂದ ತಯಾರಾದ ಉಪಕರಣಗಳು ತಿರುಗುತ್ತಾ ಬಳಕೆಯಲ್ಲಿ ಇರಬೇಕು ಹಾಗಾದರರೆ ಮಾತ್ರ ಉಪಯೋಗಿಸುತ್ತಾರೆ. ಅದಕ್ಕೆ ಬಂಡಿಗಾಲಿಯಲ್ಲಿ ಉಪಯೋಗಿಸುತ್ತಾರೆ. ಆ ಕಾರಣಕಾಗಿ ಈ ಮರವನ್ನು ಉಪಯೋಗಿಸುವುದಿಲ್ಲ.

# ೯. ಜಾಗತೀಕರಣ ಮತ್ತು ಬಡಗಿತನ :

ಜಾಗತಿ ಕರಣ ಇಡಿ ಪ್ರಪಂಚವನ್ನೇ ಒಂದು ಚಿಕ್ಕ ಹಳ್ಳಿ ಯಾಗಿ ಮಾಡುವ ಶಕ್ತಿ ಇದೆ. ಎಂದರೆ ಜಾಗತಿಕರಣ ಎಷ್ಟು ವಿಶಾಲ ಇರಬೇಕು ಎಂಬುದನ್ನು ಹೊಲಿಸಲು ಸಾದ್ಯವಿದೆ.

ಜಾತಿಕರಣ ಎಂಬ ಪದವನ್ನು ಅಮೇರಿಕಾದ ವಿಜ್ಞಾನಿ ಮಾರ್ಷಲ್ ವ್ಯೊಹೊನ್ ರವರು ೧೯೬೬ ರಲ್ಲಿ **ಎಕ್ಸ್ ಪ್ಲರೇಷನ್ ಇನ್ ಕಮ್ಯನಿಕೇಷನ್** ಎಂಬ ಗ್ರಂಥದಲ್ಲಿ ಮೊದಲ ಬಾರಿಗೆ Global village ಪದವನ್ನು ಬಳಸಿದ ಆಕ್ಸ್‌ಪರ್ಡ್ ಯುನಿವರ್ಸಿಟಿಯ ಅರ್ಥಕೋಶದ ಪ್ರಕಾರ Global ಪದಕ್ಕೆಸದೃಡತೆ - ಬಲಿಷ್ಟತೆ - ವಿಶ್ವಪ್ರಜ್ಞೆ - ಹೊಸತನ - ಸಮಷ್ಟಿ ಎಲ್ಲವೂ ಒಂದೆ ಅರ್ಥಗಳಿವೆ.

೧೯೮೦ ರ ದಶಕದಲ್ಲಿ ರಷ್ಯ, ಇಂಗ್ಲೆಂಡ, ಶ್ರೀಮಂತ ರಾಷ್ಟ್ರಗಳು ಜಾಗತಿಕರಣದ ಇನ್ನಷ್ಟು ವಿಸ್ತರಿಸಿಕೊಂಡವು ಜಾಗತಿಕರಣದ ಬಗ್ಗೆ ಅನೇಕ ವಿವಿದ ನೆಲೆಯಿಂದ ಚಿಂತಿಸಲು ಆರಂಬಿಸಿರುವುದನ್ನು ನೋಡಿದರೆ ಅನೇಕ ಗೊಂದಲ ಕಾಣುತ್ತವೆ. ಅದಕ್ಕೆ ನಿರ್ಧಿಷ್ಟ ರೂಪ ಕೊಡುವುದು ಸಾದ್ಯವಿಲ್ಲ. ಜಾಗತಿಕರಣವನ್ನು ಪರ, ವಿರೋಧ ಮಾಡುತ್ತಾ ಜಾಗತಿಕರಣವನ್ನು ಮುಂದಿಟ್ಟು ಕೊಂಡು ದೇಶಿಯತೆಯ ಬಗ್ಗೆ ಚಿಂತನೆಯನ್ನು ಮಾಡುವವರು ಇದ್ದಾರೆ. ಅಂತವರಲ್ಲಿ ಡಾ॥ ಮೊಗಳ್ಳಿಗಣೇಶ್ ರವರು ಜಾಗತಿಕರಣವನ್ನು ನೋಡುವ ದೃಷ್ಟಿಕೋನವೇ ಬೇರೆ , ಅವರ ಒಂದು ರೂಪಕವನ್ನು ಚೆನ್ನಾಗಿ

ವಿವರಿಸಿದ್ದಾರೆ ಆ ರೂಪಕದಲ್ಲಿ ಹುಲಿ ಮತ್ತು ಇಲಿಯ ಪಾತ್ರವನ್ನು ಬಹು ಚೆನ್ನಾಗಿ ವಿವರಿಸಿದ್ದಾರೆ. ಹುಲಿ ಮತ್ತು ಇಲಿಯ ತಂತ್ರಗಾರಿಕೆ ಯಿಂದ ಜಯಗಳಿಸಿದ ರೀತಿ ಅಧ್ಬುತ. ಇಂತಹ ರೂಪಕ ಗಳು ಜಾನಪದರಲ್ಲಿ ಸಾಕಷ್ಟು ಇವೆ. ಪ್ರಭುತ್ವ ಸಂಕೇತವಾದ ಹುಲಿ ಸೋಲುವುದು ಜಾನಪದ ಸಮಾಜದ ಪ್ರತಿನಿದಿಯಂತಿರುವ ಇಲಿಯು ಗೆಲ್ಲುವುದು ಇದನ್ನು ಜಾಗತಿಕರಣಕ್ಕೆ ಹೋಲಿಸಬಹುದು ಇಲ್ಲಿ ಇಲಿಯು ದೇಶಿಯ ಸಮುದಾಯಗಳಂತ್ತಿದ್ದರೆ ಹುಲಿಯ ಸಂಕೇತದಲ್ಲಿ ಜಾಗತಿಕರಣ ರೂಪದಲ್ಲಿರುತ್ತದೆ. ಹುಲಿಯ ವಿರುದ್ದ ತಂತ್ರಗಳಿಂದ ಇಲಿ ಜಯಗಳಿಸಿದಂತೆ ಜಾಗತೀಕರಣ ವಿರುದ್ದ ದೇಶಿಯ ಕೈಗಾರಿಕೆಗಳು ಅಥವಾ ದೇಶಿಯ ಸಂಸ್ಕೃತಿಗಳು ಏಕೆ ಜಾಗತೀಕರಣವನ್ನು ಮೆಟ್ಟಿನಿಲ್ಲಬಾರದು ಎಂಬುದು ನನ್ನ ಪ್ರಶ್ನೆ.

ಬಂಗಾಳ ವಿಭಜನೆ ಸಮಯದಲ್ಲಿ ದೇಶಾದ್ಯಂತ ಸ್ವದೇಶಿ ಚಳುವಳಿಯ ಮತ್ತು ವಿದೇಶಿ ವಸ್ತುಗಳ ಬಹಿಷ್ಕಾರ ಚಳುವಳಿಯನ್ನು ಹೋರಾಟದ ಮೂಲಕ ಹಮ್ಮಿಕೊಳ್ಳಲಾಗಿದೆ ಜನರು ಬ್ರಿಟಿಷ್ ನಿರ್ಮಿತ ವಸ್ತುಗಳನ್ನು ಕೊಳಲ್ಲು ನಿರಾಕರಿಸಿದರು. ಹಾಗೆಯೇ ದೇಶಿ ನಿರ್ಮಿತ ವಸ್ತುಗಳನ್ನು ಬಲ ಪಡಿಸಿತಲ್ಲದೆ ಭಾರತಿಯ ಕೃಗಾರಿಕೆಗಳಿಗೆ ಉತ್ತೇಜನ ನೀಡಿತು . ಗಾಂಧೀಜಿಯವರು ಗುಡಿ ಕೈಗಾರಿಕೆಗಳ ಬಗ್ಗೆ ಹೊತ್ತಿ ಹೇಳುತ್ತಿದ್ದರು. ಆಗ ದೇಶಭಿಮಾನ ತುಂಬಿ ತುಳುಕುತ್ತಿತ್ತು. ಈ ದೇಶಭಿಮಾನದ ಬದಲು ದ್ವೇಷಾಭಿಮಾನ ತುಳುಕುತ್ತಿದೆ. ಆಕಾಲ ಬೇರೆ ಇತ್ತು ೫೦ ವರ್ಷಗಳ ಕಾಲದ ನಂತರ ಅದೇಜನ ವಿದೇಶಿ ವಸ್ತುಗಳನ್ನೇ ಕೊಳ್ಳುತ್ತಿರುವಾಗ ಜಾಗತೀಕರಣವನ್ನು ವಿರೋದಿಸಿದಂತೆಯೇ?

ಆರ್ಥಿಕ ಒಡೆತನಕ್ಕೆ ತಕ್ಕದಾದ ತಾಂತ್ರಿಕ ಕುಶಲತೆ ಉದ್ಯಮಶೀಲತೆ ಅಪಾರ ಪ್ರಮಾಣದ ನೈಸರ್ಗಿಕ ಹಾಗೂ ಮಾನವ ಸಂಪತ್ತಿನ ಭಂಡಾರವೇ ಅಮೇರಿಕಾದ ಕೈಯಲಿತ್ತು. ಎರಡನೇ ಮಹಾಯುದ್ದದ ತರುವಾಯ ಅನೇಕ ರಾಷ್ಟ್ರಗಳು ಅಭಿವೃದಿಯ ನೀಲಿ ನಕ್ಷೆಗಳನ್ನು ತಯಾರಿಕೊಡುವ ಆರ್ಥಿಕ ಆಶ್ರಯ ನೀಡುವ ತಂತ್ರಜ್ಞಾನ ಮತ್ತು ವಿಜ್ಞಾನದ ಅವಿಷ್ಕಾರಗಳನ್ನು ಕಲಿಸಿಕೊಡುವ ಅಧಿಕೃತ ವಕ್ತಾರದಂತೆ ಅಮೇರಿಕಾದ ವೈಟ್ ಹೌಸ್ ರಾಜಕಾರಣ ಜಾಗತಿಕವಾಗಿ ಆಗಲೇ ಬೆಳೆದು ಬಿಟ್ಟಿತು. ಮುಂದೆ ಬರಲು ತವಕಿಸುವ ಅನೇಕ ರಾಷ್ಟ್ರಗಳಿಗೆ ಜನಾಂಗಳಿಗೆ ಅಮೇರಿಕಾದ ಬದುಕಿನ ಶೈಲಿ ಒಂದು ದೊಡ್ಡ ಗುರಿಯಾಗಿ ಮಾರ್ಪಟ್ಟಿತು ಎಂದು ಮೊಗಳ್ಳಿಗಣೇಶರವರು ಬರೆಯುತ್ತಾರೆ. ಅವರು ಜಾಗತೀಕರಣ ಮುಂದಿಟ್ಟುಕೊಂಡು ದೇಶಿಯ ನೆಲೆಯನ್ನು ಎತ್ತಿ ಹಿಡಿಯಲು ಪ್ರಯತ್ನಸಿರುವುದು ಕಂಡು ಬಂದರೆ ಅದು ಸಾದ್ಯವೇ ಅದೂ ಮುಂದುವರೆಯುತ್ತಿ ರುವ ದೇಶವಾದ ಭಾರತಕ್ಕೆ ಜಾಗತಿಕರಣ ಅವಶ್ಯವೇ? ಎಂಬ ಪ್ರಶ್ನೆ ಗೊಂದಲಕ್ಕೀಡು ಮಾಡಿದೆ.

ಜಾಗತಿಕರಣ ದಿಂದ ಈ ದೇಶದ ದೇಶಿಯ ತಂತ್ರಜ್ಞಾನಗಳಾದ ಅಥವಾ ಗುಡಿಕೈಗಾರಿಕೆಗಳಾದ ಬಡಗಿತನ, ಕಮ್ಮಾರಿಕೆ, ಬುಟ್ಟಿ ಹೆಣೆಯುವುದು,ನಯಗಾರಿಕೆ, ಕುಂಬಾರಿಕೆ, ಚಮ್ಮಾರಿಕೆ. ಇನ್ನು ಅನೇಕ ದೇಶಿಯ ತಂತ್ರಜ್ಞಾನಗಳೆನಿಸಿಕೂಂಡು ತಮ್ಮ ಸ್ಥಾನವನ್ನು ಉಳಿಸಿಕೊಂಡು ಬಂದಿರುವುದು ಸ್ವಾಗತಾರ್ಹವೇ. ಆದರೆ ಜಾಗತಿಕರಣದಿಂದ ಈ ಕರಕುಶಲಗಳು ಮೂಲೆಗುಂಪಾಗುವಂತಹ ಸಾಗಿವೆಯಾದರು ಎಷ್ಟೆ ಜಾಗರಿಕರಣ ವಾದರು ತಮ್ಮ ಸ್ಥಿತಿಯನ್ನು ಬಿಟ್ಟು ಕೊಟ್ಟಿಲ್ಲ.ಕೊಡುವುದಿಲ್ಲ ಏಕೆಂದರೆ ಹಳ್ಳಿಗಳಮೇಲೆ ಜಾಗತಿಕರಣ ಪ್ರಬಾವ ಬೀರಲಾರದು. ಬೀರಿದರು ಅಲ್ಪ ಸ್ವಲ್ಪ ತಮ್ಮ ಮೂಲ ಲಯವಂತೂ ಜೀವಿತ ವಾಗಿರುತ್ತದೆ ಯೆಂಬುದು ಸತ್ಯ.

ಜಾಗತೀಕರಣವು ಶ್ರೀಮಂತ ರಾಷ್ಟ್ರಗಳಿಗೆ ವರವೆಂದು ಹಿಂದುಳಿದ ದೇಶಗಳಿಗೆ ಶಾಪವೆಂದು ಎರಡು ತಳಗಳಿಂದ ನೋಡಬಹುದು. ಭಾರತ ದಂತಹ ಈ ದೇಶದಲ್ಲಿ ಜಾಗತಿಕರಣ ವರವು ಮತ್ತು ಶಾಪ ವಾಗಿಯೇ ಪರಿಣಮಿಸಿತು ಎಂದು ಹೇಳಬಹುದು.

ಜಗತ್ತಿನ ಎಲ್ಲಾ ರಾಷ್ಟ್ರಗಳು ಸಾಮಾನ್ಯ ವಾಗಿ ಕಟ್ಟಿಗೆ ಉಪಕರಣಗಳನ್ನು ಬಳಸುತ್ತಿರುವಾಗ ಜಾಗತೀಕ ಮಟ್ಟದಲ್ಲಿ ಯಾಕೆ ಸಾದಿಸಬಾರದು. ಯಾವುದೇ ರಾಷ್ಟ್ರಗಳು ಬಳಸುವ ಸೋಪಾ, ಕಾಟಾ, ಟೇಬಲ್, ಕುರ್ಚಿ, ಪೀಟೋಪಕರಣಗಳ ಜೊತೆಗೆ ಗೃಹೋಪಕರಣಗಳಾದ ಕದ, ಬಾಗಿಲು, ಕಿಟಕಿ, ಇತ್ಯಾದಿ ಪರ್ನಿಚರ್‌ಗಳನ್ನು ನೋಡಿದರೆ ಕಟ್ಟಿಗೆಯಿಂದ ನಯಗಾರಿಕೆ ಕುಶಲತೆಯಿಂದ ತಯಾರಿಸುತ್ತಾರೆ. ಹಾಗಾದರೆ ಜಾಗತಿಕರಣ ಮಟ್ಟದಲ್ಲಿ ಸ್ಪರ್ಧಿಸಲು ಸಾದ್ಯವಿದೆ. ಎಂದಮೇಲೆ ಜಾಗತಿಕರಣವನ್ನು ವೀರೊದ ಮಾಡುವುದರಲ್ಲಿ ಅರ್ಥವಿಲ್ಲ. ಜಗತ್ತಿಗೆ ಇತರ ಕೈಗಾರಿಕೆಗಳಿಗೆ ಪೂರಕವಾದವುಗಳಾಗಿರುವಾಗ ಹೆದರಿಸುವ ಅವಶ್ಯಕತೆಯಿಲ್ಲ.

ಇಂದು ಭಾರತದೇಶದಂತಹ ರಾಷ್ಟ್ರಗಳಿಗೆ ಶ್ರೀಮಂತ ರಾಷ್ಟ್ರಗಳಿಗೆ ತೆಲೆಬಾಗಿ ಸಾಲ ಯುದ್ಧೋಪಕರಣ, ಕಂಪ್ಯೂಟರ್ ಉಪಗ್ರಹ ರಾಜ ತಾಂತ್ರಿಕತೆ ಇವೆಲ್ಲವುಗಳನ್ನು ಒಪ್ಪಿಕೊಂಡು ಇಡೀ ವಿಶ್ವವನ್ನು ಒಂದು ಹಳ್ಳಿಯನ್ನಾಗಿ ಮಾಡಿಕೊಳ್ಳುವಾಗ ಅದನ್ನೆ ಏಕೆ ನಾವು ಒಪ್ಪಿಕೊಳ್ಳಬಾರದು. ಈ ಬಡಗಿಯರು ಬಡಗಿತನದಲ್ಲಿಯೇ ಜೀವಿಸುತ್ತಿರುವಾಗ ಅವರು ಕೂಡಾ ಎಲ್ಲರಿಗೂ ಸರಿಸಮನಾಗುವುದು ಬೇಡವೆ? ಬಡಗಿತನ ವೆಂಬುದು ತಾತ ಮುತ್ತಾತ ಹಾಕಿಕೊಟ್ಟ ಬುನಾದಿಯ ಮೇಲೆ ನಿಂತರೆ ಇತರರು ನೂರು ನೂರು ವರ್ಷಗಳ ಕಾಲ ಮುಂದೆಹೋಗಿ ಆಕಾಶದಲ್ಲಿ ಕಟ್ಟಡವನ್ನು ಕಟ್ಟಿಕೊಳ್ಳುತ್ತಾರೆ. ಅವರಂತೆ ಅವರು ಯಾಕಾಗಬಾರದು ಜಾಗತಿಕರಣ ಬಡಗಿಯರು ಒಪ್ಪಿಕೊಳ್ಳುವುದರಿಂದ ತಪ್ಪೇನಿಲ್ಲ.

ಅಂದು ಯಥೇಚ್ಚವಾಗಿ ಮಳೆ ಬೆಳೆ ಆಗುತಿತ್ತು. ರೈತರು ಹೆಚ್ಚು ಬೆಳೆಯುತ್ತಿದ್ದರು ಅವರು ಕೊಟ್ಟ ಕಾಳು ಕಡಿಯಿಂದ ಲೇ ಜಿವಿಸುವ ಕಾಲ ಒಂದಿತ್ತು. ಅದರೆ ಅಂತಹ ಕಾಲ ಹೋಗಿದೆ ಆ ಕಾಲದ ಪರಿಸ್ಥಿತಿಗೂ ಈ ಕಾಲದ ಪರಿಸ್ಥಿತಿಗೂ ಅಜ ಗಜಾಂತರ ವ್ಯತ್ಯಾಸವಿದೆ. ಇವತ್ತು ಕಟ್ಟಿಗೆಯ ಸಲಕರಣೆ ಬದಲಾಗಿ ಯಂತ್ರಗಳಿಂದ ವ್ಯವಸಾಯ ಮಾಡುತ್ತಿರುವಾಗ ಬಡಗಿಯರ ಮೂಲ ಉಪಕರಣಗಳತಯಾರಿಕೆಯಿಂದ ಜೀವಿಸಲು ಸಾದ್ಯವೇ ? ಸಾದ್ಯ , ಆದರೆ ಕಷ್ಟಕರ ಹಾಗಾದರೆ ಯಾಕೇ ನಾವು ಇತರರು ಮುಂದುವರೆದ ಸಮುದಾಯಗಳಿಗೆ ಸಮನಾಗಲು ಪ್ರಯತ್ನಿಸಬಾರದು. ಇದು ಜಾಗತಿಕರಣ ವೀರೊದಿಸುವ ಪ್ರತಿಯೊಬ್ಬ ವಿದ್ವಾಂಸರು ಬಾಷಣದ ಮೂಲಕ ಚರ್ಚೆಯ ಮೂಲಕ ಮೈಕ್ ಮುಂದೆ ಕೂಗುತಿರುತ್ತಾರೆ. ಜಾಗತೀಕರಣದಿಂದ ಸಾಂಸ್ಕೃತಿಕ ಕೈಗಾರಿಕೆಗಳು ಹಾಳಾಗುತ್ತವೆ. ಸಂಸ್ಕೃತಿಗೆ ಹೆಸರಾದ ಈ ದೇಶ ವಿನಾಸದ ಅಂಚಿನಲ್ಲಿದೆ. ಅದೆಲ್ಲವನ್ನು ರಕ್ಷಿಸುವ ಜವಬ್ದಾರಿ ನಮ್ಮ ನಿಮ್ಮಲ್ಲರಿಗೂ ಇದೆ ಎಂದು ಹೇಳುತ್ತಾ ಪಕ್ಕದಲ್ಲಿದ್ದ ಬಿಸ್ಲರಿ ಬಾಟಲನ್ನು ಹಿಡಿದು ನೀರು ಕುಡಿಯುತ್ತಾರೆ. ಅವರು ಹಾಕಿರುವ ಡ್ರೆಸ್ ಕೂಡಾ ವಿದೇಶಿಯ ಉಡುಪಗಳೇ. ಹಾಗಾದರೆ ಬಡಗಿಯರು ಕೂಡಾ ಆಮಟ್ಟಕ್ಕೆ ಹೋಗಬಾರದೇಕೆ? ಬಡಗಿ ಸೆಕ್ಕಿ ಬಡಿದು ರೂಪಾಯಿ ಎಂಟಾಣೆಗೆ ಬಾಯಿತೆಗೆದು ಮಕ್ಕಳ ವಿದ್ಯಾಬ್ಯಾಸ ಮಾಡಲಿಕ್ಕೂ ಯೋಗ್ಯವಲ್ಲದ ಪರಿಸ್ಥಿತಿಯನ್ನು ನೋಡಿದರೆ ಗೊತ್ತಾಗುತ್ತದೆ ಜಾಗತಿಕರಣ ವಿರೋದವಾಗಿ ಮಾತಾಡುವ ವ್ಯಕ್ತಿಯಂತವರಿಗೆ ಜಾಗತಿಕರಣವನ್ನು ತಾತ್ವಿಕ ವಾಗಿ ವಿರೋಧಿಸುವವರು ಅದರ ಅಗತ್ಯಗಳಿಂದಲೇ ಬದುಕುತ್ತಿರುತ್ತಾರೆ .

ಅವರೆಲ್ಲರೂ ವಿದ್ವಾಂಸರ ಸಾಲಿಗೆ ಸೇರಿದ ವ್ಯಕ್ತಿಗಳ ಹತ್ತಿರ ಮೊಬೈಲ್, ಕಂಪ್ಯೂಟರ್ ವಿದೇಶಿ ವಾಚ್, ಮನೆಯಲ್ಲಿ ತಮ್ಮ ಮಕ್ಕಳ ಕಾನ್ವೆಂಟ್ ಶಾಲೆಯಲ್ಲಿ ಮೇಲಂತಸ್ತಿನ ನೆಮನೆಯಲ್ಲಿ ನಾಲ್ಕಾರು ಆಳು ವಾಸಿಂಗ ಮಿಷನ್, ಗ್ಯಾಸ್, ವಿದೇಶಿ ಟಿ.ವಿ. ಅಷ್ಟೇ ಏಕೆ ನಾವು ಮಾತನಾಡು ಭಾಷೆ ವಿದೇಶಿಯದೇ ಇವೆಲ್ಲವುಗಳನ್ನು ಅನುಭವಿಸುವಾಗ ಈ ಬಡಗಿತನ ವೃತ್ತಿಯನ್ನು ಮಾಡಿಕೊಂಡು ಇವರು ಕೊಟ್ಟೊಷ್ಟೇ ಹಣ ಪಡೆದುಕೊಂಡು ಇರಬೇಕೆಂದರೆ ತುಂಬಾ ಕಷ್ಟ. ಬಡಗಿಯ ಪರಿಸ್ಥಿತಿಯನ್ನು ನೋಡಿದರೆ, ಕೂಲಿ ಮಾಡುವುದೇ ಲೇಸು ಎಂಬಭಾವನೆ ಬರುತ್ತದೆ. ಏಕೆಂದರೆ ಅಜ್ಜ ಹಾಕಿದ ಆಲದಮರಕ್ಕೆ ನೇಣು ಹಾಕಿಕೊಳ್ಳಬೇಕೆ? ಬೇಡ ನಮಗಾದ ನಷ್ಟಗಳಿಗೆ ನಮ್ಮ ಮುಂದಿನ ಪೀಳಿಗೆ ಏಕೆ ಅನುಭವಿಸಬೇಕು. ಇತರ ಸಮುದಾಯಗಳ ಜೊತೆ ಪೈಪೋಟಿ ನಡೆಸಲಿ. (ದಲಿತರು ಮತ್ತು ಜಾಗತಿಕರಣ - ಮೊಗಳ್ಳಿಗಣೇಶ್.)

ಆಧುನೀಕರಣ ಅನಿವಾರ್ಯ. ಇವತ್ತು ತಮ್ಮ ಸಂಸ್ಕೃತಿಯ ಬಗ್ಗೆ ಮಾತನಾಡುವಾಗ ಪುರಾಣ ಕತೆಗಳನ್ನು ಹೇಳಿ ಕುಳಿತುಕೊಂಡೇ ನಮ್ಮ ಸುಧಾರಣೆ ಆಗುವುದಾದರು ಹೇಗೆ.

ಒಂದು ಪ್ರಶ್ನೆ ಎಂದರೆ ಆದಿಮಾನವ ಮಂಗನಿಂದ ಮಾನವ ಎಂದು ಹೇಳುತ್ತಾರೆ. ಆದರೆ ನಾವು ಮಂಗನಂತೆ ಇರಬಹುದಾಗಿತ್ತಲ್ಲ. ಇದು ಜಾಗತಿಕರಣದ ವಿರೊದಿಗಳಿಗೆ ಪ್ರಶ್ನೆ ಬರುಬರುತ್ತಾ ಮಾನವ ತನ್ನ ಬೌತಿಕ ಬೆಳವಣಿಗೆ ಹೆಚ್ಚಾದಂತೆಲ್ಲಾ ಹೊಸನಾಗರಿಕತೆ ಜಾಗತಿಕರಣ ಯಾಕಾಗಿರಬಾರದು.

ಭಾರತ ದೇಶದ ಪ್ರತಿಯೊಬ್ಬ ಮನುಷ್ಯನಿಗೆ ಅಮೇರಿಕದಂತಹ ದೇಶಕ್ಕೆ ಅವಕಾಶ ಸಿಕ್ಕರೆ ಹೋಗಲು ಇಷ್ಟಪಡುವುದಿಲ್ಲವೇ ಒಂದು ಮಾತು ನಿಜ ಎಂದರೆ ವಿದೇಶಿಯರಿಂದಲೇ ನಮ್ಮ ಸಂಸ್ಕೃತಿ ಇತಿಹಾಸ ಆಡಳಿತ ವ್ಯವಸ್ತೆ ಶಿಕ್ಷಣ ವ್ಯವಸ್ತೆ ಹೊಸ ಪರಿಕಲ್ಪನೆ ಮೂಡಿತ್ತು ಒಟ್ಟಾರೆ ಆದುನಿಕರಣಕ್ಕೆ ಕಾರಣ ಎನ್ನಬಹುದು ಇದನ್ನು ನಮ್ಮವರು ಮರೆತಿರುವಂತೆ ಕಾಣುತ್ತದೆ. ಶ್ರೀಮಂತ ರಾಷ್ಟ್ರಗಳಿಗೆ ನಮ್ಮಂತ ರಾಷ್ಟ್ರಗಳು ಸೆಡ್ಡು ಹೊಡೆದು ಏಕೆ ನಿಲ್ಲಬಾರದು ಆಶಕ್ತಿಯಿದೆ ಮನಸಿಲ್ಲ ಜಾಗತಿಕರಣವಾಗಿ ನಮ್ಮ ದೇಶ ತಂತ್ರಜ್ಞಾನಗಳನ್ನು ಅದಕ್ಕೆ ಪೈಪೋಟಿ ಯಾಗಿ ನಿಲ್ಲಿಸಬಹುದು. ಅಂತಹ ತಂತ್ರಗಾರಿಕೆ ನಮ್ಮ ಕುಶಲಕರ್ಮಿಗಳಿಗಿದೆ ನಮ್ಮ ನೈಸರ್ಗಿಕ ಸಂಪತ್ತು ಪ್ರಪಂಚಕ್ಕೆ ಸರಿಸಾಟಿಯಾಗುವಷ್ಟು ಇದೆ. ಆದರೆ ಅದನ್ನು ವಿದೇಶಿ ಕಂಪನಿಗಳಿಗೆ ಕಚ್ಚಾವಸ್ತಗಳನ್ನು ಕಡಿಮೆಬೆಲೆಯಲ್ಲಿ ಕೊಟ್ಟು ಹೆಚ್ಚಿನಬೆಲೆಗೆ ಆಕಚ್ಚಾವಸ್ತುಗಳಿಂದ ತಯಾರಾದ ವಸ್ತುಗಳನ್ನು ಕೊಂಡು ಕೊಳ್ಳುತ್ತಾರೆ.

ಈ ಜಾನಪದಿಯಾ ಹಿನ್ನೆಲೆ ನೋಡಿದಾಗ ಈದೇಶ ಗುಡಿಕೈಗಾರಿಕೆಗಳು ಜೀವಂತವಾಗಿರಬೇಕು. ಆದರೆ ಬದಲಾವಣೆ ಅನಿವಾರ್ಯ ಈ ವಿಶ್ವಕರ್ಮರು ಕೂಡಾ ಜಾಗತಿಕವಾಗಿ ಬಲವಾಗುವುದು ಬೇಡವೇ ಈ ಸಮುದಾಯಗಳ ಅದ್ಯಾಯನ ಮಾಡಿದರೆ ಗೊತ್ತಾಗುತ್ತದೆ. ಬಡಗಿತನ, ಬಡಗಿತನ ಎಂದು ಹೇಳುತ್ತಾ ತಮ್ಮ ಭವಿಷ್ಯವನ್ನು ಹಾಳುಮಾಡಿಕೊಳ್ಳುತ್ತಾರೆ. ಬಡಗಿತನ ಕೆಲಸ ಬಡಗಿಯರಿಗೆ ವಂಶಪರಂಪರೆಯಾಗಿ ಬಂದಿರುತ್ತದೆ, ಅದನ್ನು ಕಲಿಸಲು ಸಂಘ ಸಂಸ್ಥೆಗಳು ಬೇಡ. ಆದರೆ ಇವರು ಇತರ ಸಮುದಾಯಗಳಿಗಿಂತ ಎಲ್ಲದರಲ್ಲೂ ಹಿಂದೆ ಬೀಳುವುದು ಸರಿಯಲ್ಲ. ಹೊಸಹೊಸ ತಂತ್ರಜ್ಞಾನಗಳನ್ನು ಜಾಗತಿಕವಾಗಿ ಕಂಡುಕೊಳ್ಳುವ ಸಮುದಾಯವಾಗಿದೆ.

ಉದಾಹರಣೆಗೆಹೇಳಬೇಕೆಂದರೆ ನಾನು ಎಂ. ಎ. ಮುಗಿಸಿ ಸಂಶೋಧನವಿದ್ಯಾರ್ಥಿಯಾದರೂ ಬಡಗಿತನ ಕೆಲಸಗೊತ್ತಿದೆ. ಆದರೆ ಇತರರೊಂದಿಗೆ ಪೈಪೋಟಿ ಮಾಡುವ ಮನಸ್ಸಿದೆ. ಶಕ್ತಿ ಇಲ್ಲಾ ಏಕೆಂದರೆ ಈ ಕೆಲಸದಿಂದ ಬರುವ ಆದಾಯ ಕಡುಮೆಯಾದರೆ ನಮ್ಮ ಮನೆಯುವರು ನಾನು ಹಾಕಿಕೊಂಡಿರುವ ಯೊಜನೆಗಳು ಫಲಕಾರಿಯಾಗುವುದಿಲ್ಲ. ಇವತ್ತು ನಾನು ಕಂಪ್ಯೂಟರ್ ಬಗ್ಗೆ ಕೇಳಿದ್ದೇನೆ, ನೋಡಿದ್ದೇನೆ, ಆದನ್ನು ಉಪಯೋಗಿಸಲು ಬರುವುದಿಲ್ಲ. ಕಾರಣ ಪರಿಸ್ಥಿತಿ ಹಾಗಾದರೆ ಈ ಕಾಲದಲ್ಲ ಎರಡು ಮೂರು ವರ್ಷದ ಹುಡುಗ ಕಂಪ್ಯೂಟರ್‌ನ ಮುಂದೆ ಕುಳಿತು ಇಲಿ ಹಿಡಿದು ಒತ್ತುತ್ತಿರುವಾಗ ನಮಗದರ ಪರಿಚಯವೇ ಇಲ್ಲದವರಗತಿ ಹಾಗೆ ನನ್ನಂತವರು ಈ ದೇಶದಲ್ಲಿ ಎಷ್ಟೋ ಜನಗಳಿದ್ದಾರೆ. ನಾವು ಮಾನಸಿಕವಾಗಿ ಎಷ್ಟು ದುರ್ಬಲರಾಗಿರುತ್ತೇವೆ, ಎಂದರೆ ನನ್ನಂತವರಿಗೇ ಗೊತ್ತು.

ಜಾಗತಿಕರಣದಿಂದ ಬಡಗಿಯರ ಕೆಲಸ ಇಲ್ಲವಾಗುತ್ತದೆ ಎಂದರೆ ಅದು ತಪ್ಪು. ಇಂದು ಜಾನಪದ ನಶಿಸಿದೆ ಎಂದು ಹೇಳುತ್ತಾರೆ ಆದರೆ ಅದು ತಪ್ಪು ಅದು ಜೀವಂತ ವಾಗಿರುತ್ತದೆ. ಅದರಂತೆ ಕೂಡಾ ಏನೇ ಜಾಗತಿಕರಣ ವಾದರೂ ದೇಶಿಯ ತಂತ್ರಜ್ಞಾನವಾದ ಬಡಗಿತನವು ತನ್ನ ಲಯ ಮೊನಚನ್ನು ಕುಶಲತೆಯನ್ನು ಜಾಗತಿಕವಾಗಿ ಹೇಳಿದಂತೆಲ್ಲಾ ಹೊಸಹೊಸ ಉಪಕರಣವನ್ನು ಮಾಡುವ ಪೈಪೋಟಿಯಾಗಿ ನಿಲ್ಲಬಲ್ಲದು ಎಂದು ತೋರಿಸಲು ಮನಸಿಲ್ಲ. ಆ ದಿಕ್ಕಿನತ್ತ ಯೋಚಿಸಲು ಸಮಯ ಇಲ್ಲದಂತಾಗಿದೆ.

ಜಾಗತೀಕರಣವನ್ನು ಮುಂದಿಟ್ಟು ಕೊಂಡು ದೇಶೀಯ ಗುಡಿ ಕೈಗಾರಿಕೆಗಳನ್ನು ಜಾನಪದ ಸಂಸ್ಕೃತಿಯನ್ನು ಉಳಿಸಲು ಪ್ರಯತ್ನ ಪಟ್ಟರೆ ಸಾಧ್ಯ ಇದೆ. ಹೀಗೆ ಮೂಡಿಸುತ್ತಾ ಬಂದರೆ ಈ ಸಮಯದಲ್ಲಿ ಸಿಗುವಂತ ಈ ಸಮುದಾಯಗಳಿಗೆ ಎಷ್ಟು ಕಾಲದ ನಂತರ ಸಿಗಬಹುದೋ ಏನೋ ಅದರ ಜತೆ ಜತೆಗೆ ನಮ್ಮ ಕರಕುಶಲವನ್ನು ನಾವು ಬೆಳಸಿಕೊಳ್ಳಬೇಕು ಎಂಬುದನ್ನು ನಾವು ಒಪ್ಪಲೇಬೇಕು.

ರೈತರಿಗೆ ಅತಿ ಕಡಿಮೆ ಸಮಯದಲ್ಲಿ ಆಗುವ ಕೆಲಸಗಳಿಗೆ ಮಹತ್ವ ಕೊಡುತ್ತಾರೆ. ನೇಗಿಲು ಹೊಡೆಯುವುದು ಕೂರಿಗಿಯಿಂದ ಬಿತ್ತುವುದು, ಕುಡುಗೋಲಿನಿಂದ ಕೊಯ್ಯುತ್ತಿದ್ದು ದುಂಡಿಯಿಂದ ಹಂತಿ ಹೊಡೆಯುತ್ತಿದ್ದರು. ಆದರೆ ಯಂತ್ರೋಪಕರಣದಿಂದ ಈ ವ್ಯವಸಾಯದ ಉಪಕರಣಗಳು ಬಂದಿರುವುದರಿಂದ ಆಗ ಮತ್ತು ಈಗ ಪರಿಸ್ಥಿತಿಗಳು ಬದಲಾವಣೆ ಆದಾಗ ಜಾಗತಿಕವಾಗಿ ಯಂತ್ರಗಳು ಬಂದಾಗ ಅವುಗಳನ್ನು ಉಪಯೋಗಿಸುವುದರಿಂದ ಯಾವ ತಪ್ಪು ಇದೆ, ರೈತನು ಕೂಡ ಆಧುನಿಕ ಯಂತ್ರಗಳಿಂದ ಏಕೆ ವಂಚಿತನಾಗಬೇಕು. ಅವು ಅನಿವಾರ್ಯ ಕೂಡ. ಆಗಂತ ಬಡಗಿಯು ಅದೇ ವೃತ್ತಿಯಿಂದ ಜೀವಿಸಬೇಕೂಂತ ಏನಿದೆ. ಆ ಸಮುದಾಯಗಳಿಗೆ ಸಿಗಬೇಕಾದಂತಹ ಅವಕಾಶದಿಂದ ಏಕೆ ವಂಚಿತರಾಗಬೇಕೆಂಬುದನ್ನು ಯೋಚನೆ ಮಾಡಿದರೆ ಗೊತ್ತಾಗುತ್ತದೆ. ಈಗ ಬಡಗಿಯೇ ಬಡಗಿತನ ಮಾಡುತ್ತಾರೆ ಎಂಬುದು ಸುಳ್ಳು. ಕೆಲವೊಂದು ಸಮುದಾಯಗಳು ಈಕೆಲಸ ಮಾಡುತ್ತಾರೆ. ಹಾಗಾದರೆ ಇತರ ತಂತ್ರಗಳನ್ನು ಬಡಗಿಯು ಯಾಕೆ ಮಾಡಬಾರದು ಎಂಬುದು ನನ್ನ ಪ್ರಶ್ನೆ.

ಬಡಗಿತನ ಈಗ ಹಾಳಾಗಿದೆ ಕಾರಣ ಆಧುನೀಕತೆ ಎಂದು ಹೇಳುವ ವಿದ್ವಾಂಸರು, ಬಡಗಿ ಕೆಲಸ ಮಾಡುವ ಬಡಗಿಯರು ಇತರ ಅವಕಾಶಗಳಿಂದ ವಂಚಿತರಾಗಿಲ್ಲವೇ ಎಂಬುದನ್ನು ಯೋಚಿಸಬೇಕು.

ಈ ದೇಶದ ಪ್ರಜೆಯಾಗಿ ಜಾಗತೀಕರಣ ಮುಂದಿಟ್ಟುಕೊಂಡು ದೇಶೀಯ ಗುಡಿ ಕೈಗಾರಿಕೆಗಳನ್ನು ಎತ್ತಿಕಟ್ಟಲು ಹೋಗುವುದು ಹುಚ್ಚುತನ ಎಂದರೆ ಅದು ನಮ್ಮ ಮೂರ್ಖತನ. ಈ ದೇಶದ ಜನರು ಜಾಗತೀಕವಾದ ವಸ್ತುಗಳನ್ನು ತಿರಸ್ಕರಿಸಲು ಮನಸ್ಸು ಇದೆಯೋ ಎಂದು ಪ್ರಶ್ನಿಸಿಕೊಳ್ಳಬೇಕಿದೆ. ಒಂದುಕಡೆ ದೇಶೀಯ ಮಾತುಗಳನ್ನಾಡಿ ಜಾಗತೀಕರಣವಾದ ಜೀವನ ನಡೆಸುವ ಕಳ್ಳ ಮನಸ್ಸುಗಳಿಲ್ಲ ಹೇಳಿ. ಎಲ್ಲಾ ಜಾಗತಿಕ ವಸ್ತುಗಳನ್ನು ಮತ್ತು ವಿಚಾರ ಭಾಷೆಗಳನ್ನು ಬಿಸಾಕಿ ಬನ್ನಿ, ನಾನು ನಿಮಗೆ ನಮಸ್ಕರಿಸಿ ಜಾಗತೀಕರಣವನ್ನು ವಿರೋಧಿಸುತ್ತೇನೆ. ಮೇಲ್ವರ್ಗದವರು ಲಗ್ಜುರಿಯಾಗಿ ಜೀವಿಸುತ್ತ, ಬರೀ ಮೈಲಿ ಕುಳಿತು ಬೆವರು ಸುರಿಸಿ ಅನ್ನ ನೀರು ಎನ್ನದೇ ಕೆತ್ತಿದ ವಾಸ್ತು ಶಿಲ್ಪವನ್ನು ನೋಡಿ 'ವ್ಹಾ' ಎನ್ನುವ ಅಕ್ಷರದಿಂದ ಅವನ ಹೊಟ್ಟೆ ತುಂಬುತ್ತಿದೆಯೋ ಅದಕ್ಕೆ ಬಡಗಿಯರು ತಮ್ಮ ಕರ್ಮದ ಜೊತೆಗೆ ಕರ್ಮಿಯಾಗಿ ಬೇರೆ ಮಾರ್ಗದತ್ತ ಆಲೋಚಿಸಿದರೂ ತಪ್ಪೇನಿಲ್ಲ.

ಹಿಂದೆ ಕೆಳ ಜಾತಿಗಳನ್ನು ಹೀನದೃಷ್ಟಿಯಿಂದ ನೋಡುತ್ತಿದ್ದರು. ಆದರೆ ಅವರನ್ನು ಎಲ್ಲರ ಸರಿಸಮಾನ ದೃಷ್ಟಿಯಿಂದ ತರುವ ಉದ್ದೇಶದಿಂದ ಕಾನೂನನ್ನು ಏಕೆ ತರಬೇಕಿತ್ತು. ಹೆಣ್ಣು ಮನೆಯಲ್ಲಿ ಇರಬೇಕಾದವರು ಗಂಡಸರ ಸರಿಸಮಾನರು ಎಂದು ಏಕೆ ಹೇಳಬೇಕು. ಅವರನ್ನು ಮನೆಯಲ್ಲೇ ಇರಿಸಬಹುದಿತ್ತಲ್ಲ. ಅದು ಸಾಧ್ಯವಿಲ್ಲ. ಕಾರಣ ಕಾಲ ಬದಲಾಗಿದೆ. ಅದರಂತೆ ಬಡಗಿಯರು ಹೊಸತನವನ್ನು ಏಕೆ ಹುಡುಕಿಕೊಳ್ಳಬಾರದು. ಬಡಗಿ ಸಮುದಾಯಗಳ ಸಾಂಸ್ಕೃತಿಕ ಹಿರಿಮೆಯನ್ನು ಕೊಂಡಾಡುವುದು ದೇಶೀಯ ತಂತ್ರಜ್ಞಾನವಲ್ಲ. ಆ ಸಮುದಾಯಗಳ ಸಾಂಸ್ಕೃತಿಕ ಅನುಭವಗಳನ್ನು ಹೊಸ ಕಾಲದ ಸವಾಲುಗಳ ಜೊತೆ ಪರೀಕ್ಷೆಗೆ ಒಡ್ಡುವುದೇ ನಿಜವಾದ ದೇಶೀತನ. ನಮ್ಮ ಹಳೆಯ ಗುಡಿಸಲು, ಕಾಡಿನ ನೆಲೆ, ಅಲೆಯುವ ಬದುಕು, ಜೀತಗಾರಿಕೆ, ಗುಡಿಕೈಗಾರಿಕೆಗಳ ಜೊತೆ ಬಡಗಿತನವೇ ನಮ್ಮ ಸಂಸ್ಕೃತಿಗಳು ಆದರೆ ಅವುಗಳ ಮೂಲ ಸ್ವರೂಪದ ಹಾಗೆ ಉಳಿಸಿಕೊಳ್ಳಬಹುದಿತ್ತಲ್ಲ. ಅವು ಅನಾಗರೀಕರತೆಯಿಂದ ನಾಗರೀಕತೆಯತ್ತ ಯಾಕೆ ಸಾಗಬೇಕಿತ್ತು. ತಮ್ಮ ಸ್ಥಿತಿಯಿಂದ ಬೇರ್ಪಟ್ಟು ಆಧುನಿಕ ಜಗತ್ತಿಗೆ ಒಳಗಾಗುವುದರಲ್ಲಿ ತಪ್ಪೇನಿದೆ.

ಒಟ್ಟಾರೆಯಾಗಿ ಜಾಗತೀಕರಣದಿಂದ ಬಡಗಿತನಕ್ಕೂ ಮತ್ತು ಅದನ್ನು ಮಾಡುವ ಸಮುದಾಯಗಳಿಗೆ ಯಾವುದೇ ತೊಂದರೆ ಆಗುವುದಿಲ್ಲ. ಅಥರಿಂದ ಅವಕಾಶ ವಂಚಿತರೂ ಆಗುವುದಿಲ್ಲ. ನಮ್ಮ ಸಂಸ್ಕೃತಿ, ಕೈಗಾರಿಕೆಗಳು ಎಷ್ಟೇ ಜಾಗತೀಕರಣವಾದರೂ ತಮ್ಮ ಗಟ್ಟಿತನವನ್ನು ಬಿಟ್ಟುಕೊಡುವುದಿಲ್ಲ ಎನ್ನುವುದಕ್ಕೆ ಇವತ್ತಿನ ದಿನವೇ ಸಾಕ್ಷಿ. ಅದಕ್ಕೆ ಪೈಪೋಟಿ ಮಾಡುವ ದಿಕ್ಕಿನತ್ತ ಸಾಗಲಿ ಎಂಬುದು ನನ್ನ ಆಶಯ.

ಇಲ್ಲಿ ಇವನು ಜಾಗತೀಕ ಪರವಾದ ವ್ಯಕ್ತಿ ಎಂದು ಇದನ್ನು ಓದಿದಾಗ ನಿಮಗೆ ತಿಳಿಯಬಹುದು. ತಿಳಿದರೆ ಅದು ತಪ್ಪು ಇತರ ಪೈಪೋಟಿಗಳಿಂದ ಬಡಗಿಯರು ವಂಚಿತರಾಗಬಾರದು ಎನ್ನುವುದರ ಜೊತೆಗೆ ಅವರ ವಿರುದ್ಧ ಸೆಡ್ಡು ಹೊಡೆಯುವ ಮನಸ್ಸು ಬರಲಿ ಎನ್ನುವುದೇ ಈ ವಾದದ ಉದ್ದೇಶ. (ದಲಿತರು ಮತ್ತು ಜಾಗತೀಕರಣ. ಡಾ॥ ಮೊಗಳ್ಳಿ ಗಣೇಶ).

# ಉಪಸಂಹಾರ :

ಈ ಪಂಚಾಳ ಸಮುದಾಯದ ಒಂದು ಭಾಗವಾದ ಬಡಗಿಯರನ್ನು ಹಲವಾರು ದೃಷ್ಟಿಕೋನದಿಂದ ಅಧ್ಯಯನ ಮಾಡಿದರೂ ಅವರ ನಿರ್ಧಿಷ್ಟವಾದ ಮಾಹಿತಿ ದೊರೆಯುವುದು ಕಷ್ಟ. ಸಮಗ್ರವಾಗಿ ಅಧ್ಯಯನ ಮಾಡದಿದ್ದರೂ ಸಾಧ್ಯವಾದ ಮಟ್ಟಿಗೆ ವಿಷಯವನ್ನು ಸಂಗ್ರಹವಾಗಿದೆ. ಪಂಚಾಳ ಸಮುದಾಯದಲ್ಲಿ ಪಂಚ ವೃತ್ತಿಗಳ ಹಿನ್ನೆಲೆಯಲ್ಲಿ ಅದು ಹೆಚ್ಚಾಗಿ ಶಿಲ್ಪಿಗಾರರನ್ನು ಬಿಟ್ಟು ಉಳಿದವುಗಳನ್ನು ಅಧ್ಯಯನ ಮಾಡಲು ಹಿಂಜರಿದಂತಿದೆ. ಅಂತಹ ವೃತ್ತಿಗಳಲ್ಲಿ ಒಂದಾದ ಬಡಗಿಯರ ಬಗ್ಗೆ ಅಥವಾ ಬಡಗಿ ಕೆಲಸವನ್ನು ದೇಶೀಯ ತಂತ್ರಜ್ಞಾನ ಎಂಬ ದೃಷ್ಟಿಕೋನವನ್ನು·ಇಟ್ಟುಕೊಂಡು ಅಧ್ಯಯನಕ್ಕೆ ಒಳಪಡಿಸಿದ್ದೇನೆ.

ದೇಶೀಯ ಕರಕುಶಲವನ್ನು ರಾಷ್ಟ್ರೀಯ ಉತ್ಪಾದನಾ ಘಟಕಗಳೆಂದು ಪರಿಷಣಿಸಲಾಗಿರುವುದರಲ್ಲಿ ಬಡಗಿತನವು ಒಂದು. ಅವರ ವೃತ್ತಿಯ ಕಲಾ ಕೌಶಲ್ಯವನ್ನು ನೋಡಿ ಆನಂದಿಸುವುದರ ಮೂಲಕ ಅವರ ಪರಿಶ್ರಮ ಹೇಗಿತ್ತೆಂದು ತಿಳಿದು ಬರುತ್ತದೆ. ಒಂದು ಕೆಲಸ ಪರಿಪೂರ್ಣವಾಗಬೇಕಾದರೆ ಅವನ ಪ್ರತಿಭೆಯ ಜೊತೆಗೆ ಸುತ್ತಲಿನ ಸಮಾಜವೂ ಕೂಡ ಅವಲಂಬಿತವಾಗಿರುತ್ತದೆ. ಅಂತಹ ಸಮಾಜದಲ್ಲಿ ಬಾಳಿದ ಬಡಗಿಯರು ಇತರ ಸಮುದಾಯದೊಂದಿಗೆ ಬೆರೆತುಕೊಂಡು ಬಂದಿರುವುದು ಅನಿವಾರ್ಯ. ಏಕೆಂದರೆ ಉಪಕರಣಗಳ ತಯಾರಿಕೆಯಿಂದಲೇ ತಮ್ಮ ಉಪ ಜೀವನ ನಡೆಯುವುದರಿಂದ ಸಮಾಜದಲ್ಲಿ ತಮ್ಮನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಆದರೆ ನಾವು ಪ್ರಗತಿಯನ್ನು ಹೊಂದಿದ ಜಗತ್ತಿನ ಸೃಷ್ಟಿಕರ್ತರು ಎಲ್ಲಾ ವರ್ಗಗಳಿಗಿಂತಲೂ ಹೆಚ್ಚು ಎಂಬ ಮನೋಭಾವನೆಯಿಂದ ತಮ್ಮ ಅವಸಾನಕ್ಕೆ ಅವರೇ ಕಾರಣೀಭೂತರೆನ್ನುವುದು ದುರಾದೃಷ್ಟಕರ.

ಆರ್ಯರ ಆಗಮನದಿಂದ ಅವರೊಂದಿಗೆ ಬಂದ ಬ್ರಾಹ್ಮಣರು ಈ ದೇಶದ ಬ್ರಾಹ್ಮಣರೆನಿಸಿಕೊಂಡಿದ್ದ ವಿಶ್ವಕರ್ಮರ ಪಾಂಡಿತ್ಯವನ್ನು, ವೇದಗಳನ್ನು, ಮಂತ್ರ-ತಂತ್ರಗಳನ್ನು ಬಳಸಿಕೊಂಡು ವಿಶ್ವಕರ್ಮರನ್ನು ಹಿಂದಕ್ಕೆ ತಳ್ಳಿ ಮರೆತು ಹೋದ ಸಾಮ್ರಾಜ್ಯದಂತೆ ಈ ಸಮುದಾಯವನ್ನು ಅವನತಿಯತ್ತ ಸಾಗಿಸಿದ್ದನ್ನು ನೋಡಿದರೆ ಈ ವಿಶ್ವಕರ್ಮ ಸಮುದಾಯ ಇಂದಿನ ಪರಿಸ್ಥಿತಿಯಲ್ಲಿ ಆರಕ್ಕೇರದ

ಮೂರಕ್ಕಿಳಿಯದಂತಾಗಿರುವುದು ಶೋಚನೀಯ.

ಪಾಂಚಾಳರಲ್ಲಿ ಒಬ್ಬರಾದ ಬಡಗಿಯರು ಉಪಕರಣಗಳ ತಯಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಮಾಜ ಸೇವೆಗೆ ದುಡಿಯುತ್ತಿರುವುದು ಕಂಡು ಬರುತ್ತದೆ. ಈ ಉಪಕರಣ ತಯಾರಿಸುವುದಕ್ಕೆ ಪ್ರತಿಭೆ ಬಹು ಮುಖ್ಯ ಪಾತ್ರ ವಹಿಸುತ್ತದೆ. ಎಲ್ಲಾ ರೀತಿಯ ಉಪಕರಣಗಳನ್ನು ತಯಾರಿಸಿ ಕೃಷಿಕರಿಂದ ಇಂತಿಷ್ಟು ಕಾಳು ಪಡೆದು ತಮ್ಮ ಜೀವನ ಸಾಗಿಸುತ್ತಿದ್ದರು. ಆಧುನಿಕ ಯುಗದಲ್ಲಿ ಅಳಿವಿನ ಅಂಚಿನಲ್ಲಿರುವುದನ್ನು ನೋಡಿದಾಗ ಇವರ ವೃತ್ತಿ ಕಡಿಮೆಯಾಗುತ್ತಿದೆ ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೂ ಗ್ರಾಮೀಣ ಪ್ರದೇಶಗಳಲ್ಲಿ ನಾವು ಇಂದಿಗೂ ನೋಡುತ್ತೇವೆ.

ಬಡಗಿ ಉಪಕರಣ ತಯಾರಿಸುವಂತಹ ಮರಗಳು ಪ್ರಾದೇಶಿಕವಾಗಿ ಭಿನ್ನವಾಗಿದ್ದು ತಯಾರಿಸುವ ಉಪಕರಣಗಳಲ್ಲಿಯೂ ಕೂಡ ಭಿನ್ನವಾಗಿರುತ್ತವೆ. ಏಕೆಂದರೆ ಆಯಾ ಪ್ರದೇಶದಲ್ಲಿ ಸಿಗುವಂತಹ ಮರ ಮುಟ್ಟುಗಳನ್ನು ಅವಲಂಬಿತವಾಗಿರುತ್ತವೆ. ಪ್ರದೇಶದಿಂದ ಪ್ರದೇಶಕ್ಕೆ ವೃತ್ತಿಗಳಲ್ಲಿ ವಿಭಿನ್ನತೆಯನ್ನು ಕಾಣುವುದು ಸಹಜ. ಆದರೂ ವೃತ್ತಿಯ ಮನೋಭೂಮಿಕೆ ಮಾತ್ರ ಒಂದೇ ಆಗಿರುತ್ತದೆ. ಇವರು ಬಳಸುವ ಉಪಕರಣಗಳು ಕೂಡ ಒಂದೇಯಾಗಿರುತ್ತದೆ. ಜೊತೆಗೆ ಆಚರಣೆಗಳು ಸಾಮಾನ್ಯವಾಗಿ ಒಂದೇ ರೀತಿಯಾಗಿರುವುದು ಕಂಡು ಬರುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಬಡಗಿ ಸಮುದಾಯದ ಸ್ಥಾನಮಾನ, ಆಚಾರ, ವಿಚಾರ, ಅವರ ವೃತ್ತಿ ಮತ್ತು ಆ ವೃತ್ತಿಯಲ್ಲಿ ಅವರ ಕೌಶಲ್ಯವನ್ನು ನೋಡಿದಾಗ ಈ ಸಮುದಾಯ ಇಂದಿನ ಕಾಲಕ್ಕೆ ಹೇಗೆ ಅವಶ್ಯ ಎಂಬುದನ್ನು ಕಂಡುಕೊಳ್ಳಬಹುದು. ಜೊತೆಗೆ ಅವರ ಅಭಿವೃದ್ಧಿಗೆ ಅವರೇ ಕಂಕಣಬದ್ಧರಾಗಿ ಅತಂತ್ರ ಸ್ಥಿತಿಯಿಂದ ಹೊರ ಬಂದು ತಮ್ಮ ಛಾಪನ್ನು ಮೂಡಿಸುವ ಜವಾಬ್ದಾರಿ ಇವರ ಮೇಲಿರುವುದು ಕಂಡು ಬಂದರೂ ಕೂಡ ಈ ಸಮುದಾಯದ ಏಳ್ಗೆಗೆ ಸಂಘ-ಸಂಸ್ಥೆಗಳು, ಸರ್ಕಾರ, ಇತರ ಸಮುದಾಯಗಳು ಇವರ ಜೊತೆಗೆ ಕೈ ಜೋಡಿಸಿದಾಗ ಈ ಸಮುದಾಯ ಒಂದು ನಿರ್ಧಿಷ್ಟ ಸ್ಥಾನ ಮಾನಗಳನ್ನು ಕಂಡುಕೊಳ್ಳಬಹುದು. ಮುಖ್ಯವಾಗಿ ತಮ್ಮ, ನಾವು ಎಂಬ ಭಾವನೆಗಳನ್ನು ಬಿಟ್ಟರೆ ತಮ್ಮ ಏಳ್ಗೆಗೆ ಸಾಧ್ಯವಾಗಬಹುದು.

ದೇಶೀಯ ಗುಡಿ ಕೈಗಾರಿಕೆಗಳು ಆಧುನೀಕತೆಯಿಂದ ಅಥವಾ ಜಾಗತೀಕರಣದಿಂದ ಇಂದು ಅಲ್ಪಸ್ವಲ್ಪ ಉಳಿದುಕೊಂಡು ಬಂದಿರುವುದು ಕಂಡುಬಂದರೂ ಮುಂದೆ ಇದು ವಿನಾಶದ ಅಂಚಿಗೆ ತಳ್ಳಲ್ಪಡುತ್ತವೆ. ಅದಕ್ಕೆ ಪರಿಹಾರ ಕಂಡುಕೊಳ್ಳಲೆತ್ನಿಸಿದರೆ ಅವುಗಳನ್ನು ಮತ್ತು ಅವುಗಳನ್ನು ನಂಬಿಕೊಂಡವರು ಜೀವನ ಸಾಗಿಸಬಹುದು ಇಲ್ಲದಿದ್ದರೆ ಈ ಕಸಬನ್ನು ತೊರೆದು ಬೇರೆ ಮಾರ್ಗದತ್ತ ವಾಲುವುದು ಅನಿವಾರ್ಯವಾಗುತ್ತವೆ. ಕಾರಣ ಈ ಕಸಬುಗಳನ್ನು ಉಳಿಸಲು ಪ್ರಯತ್ನಿಸಬೇಕಾದರೆ ಸ್ವದೇಶಿ ವಸ್ತುಗಳನ್ನು ಬಳಸಿ ತಮ್ಮ ನಾಡಿನ ಜನರ ಬದುಕನ್ನು ಕಂಡುಕೊಳ್ಳಬಹುದು.

# ಅನುಬಂಧ
## ಸಂಶೋಧನೆಯಲ್ಲಿ ಭಾಗಿಯಾದವರ ವಿವರ

1. **ಜಿ.ಬಿ.ಹಂಸನಂದಾಚಾರ್ಯ**
ವಯಸ್ಸು - 61
ವೃತ್ತಿ - ರಥಶಿಲ್ಪಿ
ಸ್ಥಳ : ಹೂವಿನಹಡಗಲಿ

2. **ಎಂ.ರುದ್ರಾಚಾರಿ**
ವಯಸ್ಸು : 50
ವೃತ್ತಿ - ಬಡಿಗಿತನ ಮತ್ತು ಕಮ್ಮಾರಿಕೆ
ಸ್ಥಳ : ಎಲ್ಲಾಪುರ

3. **ಮತ್ತಿಹಳ್ಳಿ ಮಲ್ಲಾಚಾರಿ**
ವಯಸ್ಸು :51
ವೃತ್ತಿ : ಕಮ್ಮಾರಿಕೆ ಮತ್ತು ಬಡಗಿತನ
ಸ್ಥಳ : ಬಂಡ್ರಿ.

4. **ಎಂ. ವೀರಾಚಾರಿ**
ವಯಸ್ಸು : 58
ವೃತ್ತಿ : ಬಡಗಿತನ ಮತ್ತು ಕಮ್ಮಾರಿಕೆ
ಸ್ಥಳ : ಎಲ್ಲಾಪುರ

5. **ಬಿ. ವಿರೂಪಾಕ್ಷಚಾರಿ**
ವಯಸ್ಸು : 32
ವೃತ್ತಿ : ಬಡಗಿತನ
ಸ್ಥಳ : ಮಾಗಡಿ ಗದಗ (ಜಿ)

6. **ಎ.ಕಾಳಚಾರಿ**
ವಯಸ್ಸು : 65
ವೃತ್ತಿ :ಪುರೋಹಿತ
ಸ್ಥಳ : ಇಟಗಿ

7. **ಹನುಮಂತಚಾರಿ ಬಿ.**
ವಯಸ್ಸು : 34
ವೃತ್ತಿ : ಪುರೋಹಿತ
ಸ್ಥಳ : ವರವಿ ಕ್ಷೇತ್ರ

8. **ತಾಯಮ್ಮ**
ವಯಸ್ಸು :60
ವೃತ್ತಿ : ಕೂಲಿ
ಸ್ಥಳ : ಸೋಗಿ

9. **ಲಕ್ಷ್ಮಣ ಚಾರಿ**
ವಯಸ್ಸು : 55
ವೃತ್ತಿ : ಹಾರ್ಮೋನಿಯಂ ವಾದನ
ಸ್ಥಳ : ಸೋಗಿ

10. **ಎಂ.ಮೌನೇಶಚಾರಿ**
ವಯಸ್ಸು : 35
ವೃತ್ತಿ : ಬಡಗಿತನ ಮತ್ತು ಕಮ್ಮಾರಿಕೆ
ಸ್ಥಳ : ಎಲ್ಲಾಪುರ.

# ಪೂರಕ ಗ್ರಂಥ ಸೂಚಿ


೧. **ಜಾನಪದ ಸಾಹಿತ್ಯ ದರ್ಶನ** -೭,೧೯೮೩ ಡಾ.ವೃಷಭೇಂದ್ರಸ್ವಾಮಿ, ಕನ್ನಡ ಅಧ್ಯಯನ ಪೀಠ, ಕ.ವಿ.ವಿ. ಧಾರವಾಡ

೨. **ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಚಾರಿಯರು,** ೧೯೯೬, - ಡಾ.ಕೆ.ಎಸ್.ಕುಮಾರಸ್ವಾಮಿ,ಕನ್ನಡ ಸಾಹಿತ್ಯ ಪರಿಷತ್ತು,ಬೆಂ.

೩. **ತಿಂಥಿಣಿ ಮೌನಯ್ಯ ಒಂದು ಅಧ್ಯಯನ,**೧೯೯೨ - ಎಂ.ಎಂ.ಪಡಶೆಟ್ಟಿ ಎಂಫಿಲ್ ಪ್ರಬಂಧ,ವೀರಶೈವ ಅಧ್ಯಯನ ಸಂಸ್ಥೆ ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಡಂಬಳ,ಗದಗ.

೪. **ಬಳ್ಳಾರಿ ಜಿಲ್ಲೆಯ ಮರದ ವಾಸ್ತುಶಿಲ್ಪ,**೨೦೦೦ - ಡಾ.ಸಿ.ಮಹಾದೇವ್,ಪ್ರಸಾರಾಂಗ ಕ.ವಿ.ವಿ. ಹಂಪಿ.

೫. **ಮಾಸ್ಪೇಕರ್ ಸಂಸ್ಕೃತಿ** ,೧೯೯೩- ಲಕ್ಷ್ಮೀಪತಿ ಬಾಲಾಜಿ,ಕರ್ನಾಟಕ ಸಾಹಿತ್ಯ ಅಕಾಡಮಿ,ಬೆಂಗಳೂರು.

೬. **ಸಿಂದ್ ಮಾದಿಗರ ಸಂಸ್ಕೃತಿ,**೧೯೯೩. - ಕೊಟಗನಹಳ್ಳಿ ರಾಮಯ್ಯ.ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು.

೭. **ಪಂಚಾಳ ವೃತ್ತಿ ಪದಕೋಶ** - ಡಾ.ಪಾಂಡುರಂಗ, ಪ್ರಸಾರಾಂಗ ಕ.ವಿ.ವಿ. ಹಂಪಿ.

೮. **ರಾಮಾಯಣದಲ್ಲಿ ವೈಶ್ವಕರ್ಮರು,**೧೯೯೪ - ಜೀವಣ್ಣ ಮಸಳಿ,ವಿಶ್ವದರ್ಶನ ಪ್ರಕಾಶನ, ಬಾಗಲಕೋಟೆ.

೯. **ಚಿತ್ತೂರುಜಿಲ್ಲಾ ಕೋರ್ಟ್ ಅದಾಲತ್** - ಸನ್ನಿವಾಳ ಆಚಾರ್ಯ, ಓಂ,ಶ್ರೀ ಗಾಯತ್ರಿ ವಿಶ್ವಕರ್ಮ ಪ್ರಕಟನಾಲಯ ೧೧ನೇ ಕ್ರಾಸ್ ಕಿಲಾರಿ ರೋಡ್,ಬೆಂಗಳೂರು.

೧೦. **ಭಾರತೀಯ ಸಂಸ್ಕೃತಿಗೆ ವಿಶ್ವಕರ್ಮರ ಕೊಡುಗೆ** - ಜಿ.ಜ್ಞಾನಾನಂದ,ಜ್ಞಾನ ಭಂಡಾರ. ಬಿ.ಇ.ಎಂ.ಎಲ್.ನಗರ ಕೆ.ಜಿ.ಎಫ್

೧೧. **ವಿಶ್ವಕರ್ಮ ಪೂಜೆಯ ತತ್ವ** - ಜಿ.ಜ್ಞಾನಾನಂದ, ಜ್ಞಾನ ಭಂಡಾರ. ಬಿ.ಇ.ಎಂ.ಎಲ್.ನಗರ ಕೆ.ಜಿ.ಎಫ್.

೧೨. **ಕರ್ನಾಟಕ ಗ್ರಾಮ ದೈವಗಳ ಸಂಸ್ಕೃತಿ ವಿಕಾಸ** ,೨೦೦೨- ಡಾ.ಮೊಗಳ್ಳಿ ಗಣೇಶ್, ಅಪ್ರಕಟಿತ ಪಿ.ಹೆಚ್.ಡಿ. ಪ್ರಬಂಧ,ಕ.ವಿ.ವಿ. ಹಂಪಿ.

೧೩. **ಕರ್ನಾಟಕದ ವಾಸ್ತು ಶಿಲ್ಪ ಮತ್ತು ಚಿತ್ರ ಕಲೆ.**೧೯೯೮-ರಾಜಶೇಖರ್, ಎಸ್. ಸುಜಾತ ಪಬ್ಲಿಕೇಷನ್ಸ್, ಧಾರವಾಡ.

೧೪. **ಕರ್ನಾಟಕ ಚರಿತ್ರೆ**-೧,೧೯೯೭,ಸಂ. ಶೇಖ ಅಲಿ.ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೧೫. **ಕರ್ನಾಟಕ ವಾಸ್ತುಶಿಲ್ಪ** -ಕನ್ನಡ ಅಧ್ಯಯನ ಪೀಠ, ಮೈಸೂರು ವಿ.ವಿ. ಮೈಸೂರು.

೧೬. **ಗ್ರಾಮ ಸಂಸ್ಕೃತಿ ಮಾಲೆ-೧, ಗ್ರಾಮೀಣ ವೃತ್ತಿಗಳು,**೨೦೦೦. ಕರ್ನಾಟಕ ಸರ್ಕಾರ ಕನ್ನಡ ಪ್ರಾಧಿಕಾರ ಬೆಂ.

೧೭. **ದಲಿತರು ಮತ್ತು ಜಾಗತೀಕರಣ,**೧೯೯೯ - ಡಾ.ಮೊಗಳ್ಳಿ ಗಣೇಶ್, ಪ್ರಸಾರಾಂಗ ಕನ್ನಡ.ವಿ.ವಿ. ವಿದ್ಯಾರಣ್ಯ, ಹಂಪಿ.

೧೮. **ಜಾನಪದ ವಿಶ್ವಕೋಶ** - ಚಂದ್ರಶೇಖರ ಕಂಬಾರ್, ಪ್ರಸಾರಾಂಗ ,ಕನ್ನಡ ವಿ.ವಿ.ವಿದ್ಯಾರಣ್ಯ , ಹಂಪಿ.

೧೯. **ಕೃಷಿ ಬೆಳವಣಿಗೆ** -೧೯೮೫.ವಿದ್ಯಾನಿಧಿ ಪ್ರಕಾಶನ ಗದಗ.

೨೦. **ಸಂಡೂರಿನ ಕಾರ್ತಿಕೇಯವನ,**೧೯೯೭ - ವಾಸುದೇವ ಬಡಿಗೇರ.ಮಯು ಪ್ರಕಾಶನ ಕಮಲಾಪುರ.

೨೧. **ಶಿರಸಂಗಿ ಕಾಳಮ್ಮ ಒಂದು ಸಾಂಸ್ಕೃತಿಕ ಅಧ್ಯಯನ (ಚಾರಿತ್ರಿಕ ಪರಂಪರೆ)**-೨೦೦೨, ವಾಸುದೇವ ಬಡಿಗೇರ ಶ್ರೀಜಾ-ಬಾಗಿಲಂ ಪ್ರಕಾಶನ, ಹೊಸಪೇಟೆ

೨೨. ಶಿರಸಂಗಿ ಕಾಳಮ್ಮ ಒಂದು ಸಾಂಸ್ಕೃತಿಕ ಅಧ್ಯಯನ (ಆರಾಧನಾ ಪರಂಪರೆ) ೨೦೦೨-ಗಂಗಾಧರ ದೈವಜ್ಞ,
-ಶ್ವೇತಾ-ಭಾಗೀರಥಿ ಪ್ರಕಾಶನ, ಹೊಸಪೇಟೆ

೨೩. **ಶಂ.ಬಾ.ಜೋಷಿ ಸಂಪುಟ**-೬.೧೯೯೯, ಕನ್ನಡ ಪುಸ್ತಕ ಪ್ರಾದಿಕಾರ ಚಾಮರಾಜ ಪೇಟೆ, ಬೆಂಗಳೂರು.

೨೪. **ವಿಶ್ವಕರ್ಮ ಗುಣಗಾನ** -೧೯೮೪- ಗುರುಲಿಂಗಾಚಾರ್ಯ .ವಿ. ಶ್ರೀಮದ್ ವಡ್ಡನಾಳ ಬೆಂಗೂರು ಸಂಸ್ಥಾನ ವಿಶ್ವಕರ್ಮ
ಸಮಾಜ (ರಿ) ವಡ್ಡನಾಳ, ಚೆನ್ನಗಿರಿ.

೨೫. **ಸಂಕೀರ್ಣ ವಚನ ಸಂಪುಟ**-೩,೧೯೯೩. ಸಂಪಾದಕರು ಡಾ.ಬಿ.ಆರ್.ಹಿರೇಮಠ್. ಕನಾರಟಕ ಸರ್ಕಾರ ಕನ್ನಡ ಮತ್ತು
ಸಂಸ್ಕೃತಿ ನಿರ್ಧೇನಾಲಯ, ಬೆಂಗಳೂರು.

೨೬. **ಜನ ಜಾನಪದ,೨೦೦೦** - ಡಾ.ಮಂಜುನಾಥ ಬೇವಿನಕಟ್ಟಿ. ಪ್ರಸಾರಾಂಗ ಕನ್ನಡ ವಿ.ವಿ. ಹಂಪೆ.

೨೭. **ಕರ್ನಾಟಕದಲ್ಲಿ ಮುದ್ದೆ ಕಂಬಾರರು** ,೨೦೦೦- ಪಿ.ಎಚ್.ಡಿ. ಮಹಾ ಪ್ರಬಂಧ - ಡಾ.[illegible],ಕ.ವಿ.ವಿ. ಹಂಪೆ. [illegible]

೨೮. **ಕೃಷಿ ಪದ ಕೋಶ**- ೧೯೯೯, ಪ್ರಸಾರಾಂಗ ಕ.ವಿ.ವಿ. ಹಂಪೆ.

೨೯. **ಕರಕುಶಲ ಕಲೆಗಳು**-೨೦೦೦, ಪ್ರಸಾರಾಂಗ ಕ.ವಿ.ವಿ. ಹಂಪೆ.

೩೦. **ಕನ್ನಡ ವಿಶ್ವಕೋಶ ಸಂಪುಟಗಳು.**-೧೯೮೩, ಕನ್ನಡ ಅಧ್ಯಯನ ಸಂಸ್ಥೆ,ಮೈಸೂರು ವಿ.ವಿ.ಮೈಸೂರು.

೩೧. **ಎಫಿಗ್ರಾಫಿ ಕರ್ನಾಟಕ ಸಂಪುಟಗಳು** -೧೯೭೫, ಕನ್ನಡ ಅಧ್ಯಯನ ಸಂಸ್ಥೆ,ಮೈಸೂರು ವಿ.ವಿ.ಮೈಸೂರು.

ಪತ್ರಿಕೆಗಳು :

೧. **ಸಂಯುಕ್ತ ಕರ್ನಾಟಕ** - ದಿನ ಪತ್ರಿಕೆ

೨. **ಶ್ರೀ ವಿಶ್ವಕರ್ಮ ಧರ್ಮ ಪ್ರಚಾರ** (ವಾರಪತ್ರಿಕೆ) ಟಿ. ಆರ.ಪ್ರಭಾಕರ. ಒಕ್ಕಲಿಗರ ಓಣಿ ಚಿಚಲಿವರ ವಠಾರ ಗದಗ.

೩. **ಸಂಪಾದಕರು - ವಾರಪತ್ರಿಕೆ**-ಮಾಲತೇಶ ಶಾಸ್ತ್ರಿ, ಶಾಸ್ತ್ರಿ ಪ್ರಿಂಟರ್ಸ್ ದೊಡ್ಡ ಪೇಟೆ, ದಾವಣಗೇರಿ.

೪. **ವಿಶ್ವಕರ್ಮ ಕಲಾ - ಮಾಸ ಪತ್ರಿಕೆ**, ಶಿಲ್ಪ ಪ್ರಿಂಟರ್ಸ್ ನಂ.೨೭,ವಿಧ್ಯಾಪೀಠ ರಸ್ತೆ, ಬೆಂ.೨೮.

೫. **ವಿಶ್ವ ಕರ್ಮೋದಯ** - ಮಾಸಪತ್ರಿಕೆ. ಪ್ರಕಾಶಕರು, ಶ್ರೀ ಕಾಳಿಮಠೇಶ್ವರಿ ದೇವಾಲಯದ ಬಳಿ,
ಕಾಮನ ಬಾವಿ ಬಡಾವಣೆ ಚಿತ್ರದುರ್ಗಾ.

ಆಂಗ್ಲ ಗ್ರಂಥಗಳು

1. Viswakarma (series-I) Ananda .K. and Koomaraswamy (1919)

2. The mysore tribes and eastes (Vol-5) Anantha krishna I year.

3. Caste and tribis of south Indian - Ealges tharston - and Rang a chari - (1987)

4. The Makers of the world - Jhon Brouristy (1995)

5. Hindu Maners Customs and ceremonies (1959), Abbe Dubois ,

6. South indin Inscriptions.(                )

***

## : ರೇಖಾಚಿತ್ರಗಳು :

### :: ಬಳಸುವ ಉಪಕರಣಗಳು :-



① ಕೊಡ್ತಿ, ② ಅಗಲಂಬಾಚಿ, ③ ಕಡೆಉಳಿ, ④ ಬೈರಿಗೆ



⑤ ಉಜ್ಜು ಬಾಚಿ, ⑥ ಉದ್ದ ಬಾಚಿ, ⑦ ಕೈಬಾಚಿ, ⑧ ಸುತ್ತಿಗೆ

